


# ಪರಿವಿಡಿ











ರಾಜರಸಿಕ

# ಬೀರಬಲನ ಕಥೆಗಳು



## — ಪೂರ್ವ ಪೀಠಿಕೆ —

ಮೊಗಲ್ ಸಮ್ರಾಟ್ ದಿಲ್ಲಿಯ ಅಕಬರ ಬಾದಶಹನು ಭಾರತದಲ್ಲಿ ಅತಿ ವಿಖ್ಯಾತನಾಗಿ ಆಳಿಹೋದನು. ಅವನ ದರಬಾರಿನಲ್ಲಿ ಚತುರರೂ, ಮುತ್ಸದ್ದಿಗಳೂ, ರಾಜ್ಯಕಾರ್ಯ ದುರಂಧರರೂ ಆದ ಮಂತ್ರಿಗಳು ತಮ್ಮ ತಮ್ಮ ಗುಣಗೌರವದಿಂದ ಬೆಳಕಿಗೆ ಬಂದು ಕೀರ್ತಿಶೇಷರಾಗಿ ಹೋದರು. ರಾಜನು ಸ್ವತಃ ಮುಸಲ್ಮಾನನಾಗಿದ್ದರೂ ಒಂದಿಲ್ಲೊಂದು ಸಂಬಂಧದಿಂದ ಅವನ ದರಬಾರವು ಬಹುಜನ ಹಿಂದುಗಳಿಗೆ ಆಶ್ರಯಸ್ಥಾನವಾಗಿದ್ದಿತು. ಆತನ ದರಬಾರಿನಲ್ಲಿ 'ನವರತ್ನ'ಗಳೆಂದು ಖ್ಯಾತಿಪಡೆದ ರಾಜಾ ತೋಡರಮಲ್ಲ, ಮಾನಸಿಂಗ, ಫೈಜಿ, ಬೀರಬಲ ಮುಂತಾದವರು ತಮ್ಮ ತಮ್ಮಲ್ಲಿಯ ಅಗಾಧ ವಾದ ಮೇಧಾಶಕ್ತಿಯಿಂದ ಬಾದಶಹನ ಪರಮ ಪ್ರೀತಿಗೆ ಪಾತ್ರರಾಗಿ ಅವನ ರಾಜ್ಯಸೂತ್ರಗಳಲ್ಲೊಂದೊಂದು ಎಳೆಯ ಮುಖ್ಯ ಚಾಲಕರಾಗಿ ಬಿಟ್ಟಿದ್ದರು. ಅವರಲ್ಲಿ ಬೀರಬಲನಂತೂ ಸದಾವಕಾಲವೂ ನೆರಳಿನಂತೆ ಬಾದಶಹನ ಜೊತೆಗೇ ಇದ್ದು ಅವನ ಒಳ್ಳೆ ಸ್ನೇಹಿತನಾಗಿ ತನ್ನ ಅದ್ವಿತೀಯ ಪಾಂಡಿತ್ಯ ದಿಂದ ಬಾದಶಹನನ್ನಷ್ಟೇ ಏಕೆ? ಎಲ್ಲರನ್ನೂ ದಂಗುಬಡಿಸುವಂಥ ಚತುರ ಮಂತ್ರಿಯಾಗಿ ಮೆರೆದನು. ಈಗಿನ ಭಾರತದ ಪ್ರತಿಯೊಂದು ಹಳ್ಳಿ ಪಳ್ಳಿ ಗಳಲ್ಲಿಯೂ ಕೂಡ ಈ ಬೀರಬಲನ ಹೆಸರನ್ನೂ ಅವನು ಬಾದಶಹನೊಡನೆ ನಡೆಯಿಸಿದ ಚತುರ ನುಡಿಯುಕ್ತಿ ಕತೆಗಳನ್ನೂ ಕೇಳದವರೇ ಅಪ ರೂಪವೆಂದು ಹೇಳಬಹುದು. ಬಾದಶಹನೊಡನೆ ರಸಿಕತೆಯಿಂದ ವರ್ತಿಸಿದ ಆ ಬೀರಬಲನ ಮಾತು ಕೃತಿಗಳೆಲ್ಲ ಈಗಿನವರಿಗೆ ಮನರಂಜಕವಾದ ಕತೆ ಗಳಾಗಿ ರೂಢವಾಗಿವೆ. ಪುರಾತನದ ಕೆಲವು ಕವಿಗಳು ಬರೆದ ನಾಟಕಗಳಲ್ಲಿ ಧೀರೋದಾತ್ತನಾಯಕನ ಶ್ರೇಷ್ಠತೆಯನ್ನು ಆತನ ವಿದೂಷಕನೆಂಬ ವ್ಯಕ್ತಿ ಯಿಂದ ವ್ಯಕ್ತಪಡಿಸುವರು. ಅದರಂತೆ, ಐತಿಹಾಸಿಕ ಕಾಲದಲ್ಲಿಯು

ರಾಜರುಗಳು ಈ ಬೀರಬಲನಂಥ ಚಾತುರ್ಯ-ಯುಕ್ತ ದಾರರಿಗೆ ಆಶ್ರಯವಿತ್ತು, ಮರ್ಯಾದಿಸುತ್ತಿದ್ದರು. ನಂದರಾಜನಲ್ಲಿ ವರರುಚಿಯೂ, ಭೋಜರಾಜನಲ್ಲಿ ಕಾಲಿದಾಸನೂ, ಅಕಬರನಲ್ಲಿ ಬೀರಬಲನೂ ಆಶ್ರಯಿತರಾಗಿ ಇದ್ದದ್ದು ಇದೇ ಪಾರಂಪರ್ಯವೆಂದು ಹೇಳಬಹುದು. ಬೀರಬಲನ ಸಮಕಾಲದಲ್ಲಿ ದಕ್ಷಿಣ ಭಾರತದಲ್ಲಿ ಹೆಸರುವಾಸಿಯಾಗಿ ರಾಜ್ಯಭಾರ ಮಾಡಿದ ವಿಜಯ ನಗರದ ಕೃಷ್ಣರಾಯನದರಬಾರಿನಲ್ಲಿಯೂಕೂಡ ತೆನ್ನಾಲಿಯ ರಾಮಯ್ಯನೂ ಸಹ ಇದೇ ತತ್ವದಿಂದ ರಾಯರ ಸಭೆಯಲ್ಲಿ ಸೇರಿ ಒಳ್ಳೆ ರಾಜಹಾಸ್ಯಗಾರ ನೆಂದು ಪ್ರಸಿದ್ಧವಾದುದು ಕನ್ನಡಿಗರೆಲ್ಲರಿಗೂ ಶ್ರುತವಾಗಿದ್ದ ಸಂಗತಿಯು.

ಒಟ್ಟಿನಮೇಲೆ ಹಿಂದಿನ ಹಲವು ರಾಜ-ರಾಜರುಗಳು 'ಹಾಲಿನೊಡನೆ ಸಕ್ಕರೆ' ಎನ್ನುವಂತೆ ಇಂಥ ವಿದ್ವನ್ಮಣಿಗಳ ಸಮ್ಮೇಲನವಿಲ್ಲದಿರುತ್ತಿದ್ದಿಲ್ಲ. ಬೀರಬಲನಾದರೂ ಅದರಂತೆಯೇ ಅಕಬರನ ಆಸ್ಥಾನದಲ್ಲಿ ಶೋಭಾಯಮಾನ ನಾದಂಥವನು. ಹಲವು ತಲೆಮಾರುಗಳಿಂದ ದಾರಿದ್ರ್ಯವೃತ್ತಿಯಿಂದ ಕೂಡಿದ ಮನೆತನದ ಆ ಬೀರಬಲನು ತನ್ನ ಯುಕ್ತಿ-ಚಾತುರ್ಯ-ವಿದ್ಯೆಗಳಿಂದ ಒಳ್ಳೆ ಅದೃಷ್ಟವಂತನಾದನು. ಬಾದಶಹನಿಂದ 'ರಾಜಾ ಬೀರಬಲ' ಎಂಬ ಬಿರುದುಹೊಂದಿ ಇತಿಹಾಸದಲ್ಲಿಯೂ ಜನಪದದಲ್ಲಿಯೂ ಪ್ರಸಿದ್ಧ ಪುರುಷ ನಾಗಿ ಹೋದನು.

## - ಬೀರಬಲನ ಸಂಕ್ಷಿಪ್ತ ಪರಿಚಯ -

ಈತನು ಉತ್ತರ ಭಾರತದಲ್ಲಿಯ ಒಂದು ಸಾಮಾನ್ಯ ಗ್ರಾಮದ ನಿವಾಸಿಯು. ಕನೋಜೀ ಬ್ರಾಹ್ಮಣನೊಬ್ಬನಿಂದ ಜನಿಸಿದವನು. 'ಮಹೇಶ್ವರ ದಾಸ' ಎಂಬ ಹೆಸರಿನಿಂದ ಈತನನ್ನುಸಂಬೋಧಿಸುತ್ತಿದ್ದರು. ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ ಇವನು ದರಿದ್ರ ಮನೆತನದಲ್ಲಿ ಜನ್ಮತಾಳಿದರೂ ಮುಂದೆ ತನಗೆ ದೊರೆತ ರಾಜಾಶ್ರಯದಿಂದ ಅಕಬರ ಬಾದಶಹನಿಂದ 'ರಾಜಾ' ಎಂಬ ಶ್ರೇಷ್ಠ ಪದವಿಯನ್ನು ಹೊಂದಿದನು. ಹಾಗು ಇ.ಸ ೧೫೭೪ ರಲ್ಲಿ ನಗರಕೋಟದ ಜಹಗೀರನ್ನು ಆತನಿಂದ ಸಂಪಾದಿಸಿ ಆಜನ್ಮವಾಗಿ ಸುಖಪಡೆದನು. 'ಬೀರಬಲ' ಎಂಬ ಹೆಸರು ಇವನ ಅಂಕಿತ ನಾಮವಾಗಿರದೆ

ಅನ್ವರ್ಥಕವಾಗಿದ್ದಿತೆಂದು ಅವನ ಶೂರತನದ ಕೃತಿಯೊಂದರಿಂದ ವ್ಯಕ್ತವಾಗು ವದು. ಒಂದಾನೊಂದುದಿನದಲ್ಲಿ ಆತನುಒಂದು ಭಯಂಕರವಾದಹುಲಿಯನ್ನು ಎದುರಿಸಿ ಅದನ್ನು ತನ್ನ ಕೈಗತ್ತಿಯ ಒಂದೇ ಏಟಿನಿಂದ ಇಕ್ಕರಿಸಿದನು. ಆ ಕೂಡಲೇ ಅವನು ತನ್ನಲ್ಲಿ ಉದ್ಭೂತವಾದ ವೀರ ವಾಣಿಯಿಂದ 'ಭಲೇಬೀರ್' ಎಂದು ಒದರಿ ಉಚ್ಚರಿಸಿ ಹುಚ್ಚನಂತೆ ಕುಣಿದಾಡಹತ್ತಿದನು. ತನ್ನನ್ನು ತಾನೇ ಶಬ್ದಗಳಿಂದ ಗೌರವಿಸಿಕೊಳ್ಳುತ್ತಿರುವ ಆತನ ನಿಜವಾದ ಶೂರತನಕ್ಕೆ ಲುಬ್ಧರಾದ ಹಲವರು ಅವನನ್ನು ಆ ಕೂಡಲೇ ಮೆರವಣಿಗೆ ತೆಗೆದು ಮೆರೆಯಿ ಸಿದರು. ವಸ್ತ್ರಭೂಷಣಗಳನ್ನಿತ್ತು ಗೌರವಿಸಿದರು ಹಾಗು ಅವನ ಮುಖೋ ದ್ಗಳಿತ 'ಭಲೇಬೀರ್' ಎಂಬ ಶಬ್ದವನ್ನೇ ಉಪಯೋಗಿಸಿ ಅವನನ್ನು ಸಂಬೋ ಧಿಸಿದರು. ಮತ್ತು ಅದೇ ಹೆಸರಿನಿಂದ ಆತನ ಜಯಜಯಕಾರ ಮಾಡಿದರು.

ಬೀರಬಲನ ಬಾಹುವಿನಲ್ಲಿ ಸುಪ್ತವಾಗಿದ್ದ ಶೂರತನವು ಮೇಲೆ ಹೇಳಿದ ಬಗೆಯಿಂದ ಪ್ರಕಟವಾಯಿತು. ಅದರಂತೆಯೇ ಮುಂದೆ ಅನತಿ ಕಾಲದಲ್ಲಿ ಅವನ ಮೇಧಾಶಕ್ತಿಯು ತನ್ನ ಸ್ಥಾನದಿಂದ ಹೊರಬೀಳದಿರಲಿಲ್ಲ. ಅವನ ಜಿಹ್ವೆಯಲ್ಲಿ ಅವ್ಯಕ್ತವಾಗಿದ್ದ ವಾಗ್ಝರಿಯೂ ಸಹ ಇಂಗದೆ ಮುಂದೆ ಸಾಗ ಹತ್ತಿತು. ಮನಮೋಹಕವಾದ ಆ ತರುಣನ ಚೆಲುವಿಕೆಯು ಬೆಳಕುಗಾಣಲು ಹಾತೊರೆಯಹತ್ತಿತು. ಇಂತಾಗಿ ಕೊನೆಗೆ ಇವೆಲ್ಲವೂ ಆತನನ್ನು ಅವನ ದರಿದ್ರಾವಾಸದಿಂದ ರಾಜಭವನಕ್ಕೆಳೆಯದೆ ಬಿಡಲಿಲ್ಲ.

## - ಅಕಬರ-ಬೀರಬಲರ ಪ್ರಥಮ ಪರಿಚಯ -

ಬೀರಬಲನು ಕತ್ತಿಯ ಒಂದೇ ಹೊಡೆತದಿಂದ ಹುಲಿಯನ್ನು ತುಂಡರಿ ಸಿದ ಸಂಗತಿಯು ಕರ್ಣೋಪಕರ್ಣವಾಗಿ ಸುತ್ತಲೆಲ್ಲ ಹರಡಿತು. ಹಿಂದೀ ವೀರರು ಅವನ ಈ ಶೂರ ಕೃತಿಯನ್ನು ಬಹು ಸೊಗಸಾಗಿ ವರ್ಣಿಸಹತ್ತಿದರು. ಆಗಿನ ಕಾಲದ ಮೊಗಲ್ ಬಾದಶಹ ಅಕಬರನ ಕಿವಿಯ ವರೆಗೂ ಬೀರಬಲನ ಈ ಪರಾಕ್ರಮ ವಾರ್ತೆಯು ತಲುಪದೆ ಬಿಡಲಿಲ್ಲ. ಗುಣಗ್ರಾಹಿಯಾದ ಆ ಅಕ ಬರನು 'ತನ್ನಲ್ಲಿ ಇಂಥ ವೀರರಿರಬೇಕು' ಎಂಬ ಸಹಜ ಪ್ರವೃತ್ತಿಯವನಾ ದನು. ಆಗ ಆತನು ಬೀರಬಲನನ್ನು ತನ್ನ ಬಳಿಗೆ ಕರೆಯಿಸಿಕೊಂಡು ತನ್ನ

ಸೈನ್ಯದಲ್ಲಿ ಸೇರಿಸಿಕೊಳ್ಳುವ ಬಗೆಗೆ ವಿಚಾರ ಮಾಡಹತ್ತಿದನು. ಆದರೆ ಧರ್ಮವು ಅವನ ಈ ವಿಚಾರಕ್ಕೆ ಅಡ್ಡ ಬರುವದನ್ನು ಮಾತ್ರ ಅವನು ತಿಳಿಯದಿರಲಿಲ್ಲ. ಬೀರಬಲನು ಬ್ರಾಹ್ಮಣನು, ಸೈನ್ಯದಲ್ಲಿ ಸೇರ್ಪಡೆಯಾಗಲು ಅವನ ಮನವೊಪ್ಪದಿದ್ದರೆ ಅವನನ್ನು ತಾನು ಒತ್ತಾಯ ಪಡಿಸುವದು ಹೇಗೆ? ಈ ತಿಳುವಳಿಕೆಯಿಂದಲೇ ಆತನು ಕೆಲ ದಿನ ಹಾಗೇ ಬಿಟ್ಟನು. ಹಿಂದುಗಳಲ್ಲಿ ಅದೆಷ್ಟೋವೀರರಿರುವರು, ವಿದ್ವಾನರು ಇರುವರು, ಮುತ್ಸದ್ದಿಗಳಿರುವರು. ಅಂಥವರಿಗೆಲ್ಲ ತಾನು ಆಶ್ರಯ ನೀಡಿದರೆ ಹಿಂದು ವಿಶಿಷ್ಟವಾದ ತನ್ನ ರಾಜ್ಯವು ಚಿರಕಾಲ ಬಾಳುವದೆಂದೇ ಆ ಅಕಬರನ ವಿಚಾರವಾಗಿದ್ದಿತು. ಅಷ್ಟೇ ಅಲ್ಲ. ಅವನು ತನ್ನ ವಿಚಾರದಂತೆ ಹಿಂದುಗಳನ್ನು ತನ್ನ ಕಡೆಗೆ ಒಲಿಸಿಕೊಳ್ಳುವದಕ್ಕೆ ಉದ್ಯುಕ್ತನಾಗಿ ಕಾರ್ಯ ಮಾಡಹತ್ತಿದನು. ಅದರಂತೆ ಅವನ ಉದ್ದೇಶವೂ ಈಡೇರ ಹತ್ತಿತು.

ಬಾದಶಹನು ಹಿಂದುಗಳೊಡನೆ ಪ್ರೇಮದಿಂದ ವರ್ತಿಸುವದು ಅದೆಷ್ಟೋ ಯವನರಿಗೆ ಸರಿಬಾರದಾಯಿತು. 'ಬಾದಶಹನು ನಮ್ಮ ಧರ್ಮದವನು, ಇದು ನಮ್ಮ ರಾಜ್ಯವು, ಬಾದಶಹನು ನಮ್ಮನ್ನೇ ಆತ್ಮೀಯತೆಯಿಂದ ಕಾಣಬೇಕು, ಆಜನ್ಮ ವೈರಿಗಳಾದ ಹಿಂದುಗಳನ್ನು ತಿರಸ್ಕರಿಸಬೇಕು' ಇತ್ಯಾದಿ ಸಂಕುಚಿತ ವಿಚಾರಗಳೆಲ್ಲ ಆ ಯವನರಲ್ಲಿ ಉದ್ಭವಿಸಿದವು. ಇಷ್ಟೇ ಅಲ್ಲ. ಅವರು ತಮ ತಮಗೆ ಹೊಳೆದ ಕುಹಕ ಬುದ್ಧಿಗಳಿಂದ ಹಿಂದುಗಳನ್ನು ಕೀಳ್ದೆಸೆಗೆ ಎಳೆದ ಅವರ ಬಗೆಗೆ ಬಾದಶಹನಲ್ಲಿ ಅನಾದರತೆಯನ್ನು ಹುಟ್ಟಿಸುವದೇ ತಮ್ಮ ಕರ್ತವ್ಯವೆಂದು ಭಾವಿಸಿದರು. ಮತ್ತು ಆ ದಿಸೆಯಲ್ಲಿಯೇ ಅವರು ತಮ್ಮ ದುಷ್ಕೃತಿಗಳಿಗಾರಂಭಿಸಿದರು. ಆದರೆ ತಾವು ಮಾಡುವ ಕೃತಿಗಳ ಹೇಯತೆಯು ಅವರಿಗೆ ಅಷ್ಟೊಂದು ತಿಳಿಯದಿದ್ದರೂ ವಿಚಾರವಂತನಾದ, ಅವರ ಧರ್ಮದವನಾದ ಬಾದಶಹ ಅಕಬರನಿಗೆ ಅದರ ಅರಿವಾಗದಿರಲಿಲ್ಲ.

ಒಂದಾನೊಂದು ದಿನದ ಪ್ರಸಂಗ– ದಿಲ್ಲಿಯ ನಾಡಿನಲ್ಲಿ ಹಿಂದೂ–ಯವನರ ನಡುವೆ ಮನದ್ವೇಷವು ಹೆಚ್ಚಿದ ಕಾಲ. ಸ್ವಕೀಯ ಬಾದಶಹನೆಂಬ ಅಹಮಹಮಿಕೆಯಿಂದ ವರ್ತಿಸುವ ಪಕ್ಷದ ಯವನರು ಹಿಂದುಗಳ ಮೇಲೆ ನಡೆಯಿಸಿದ ಬಲಾತ್ಕಾರ–ಒತ್ತಾಯಗಳ ಕಾಲ. ಇಂಥದರಲ್ಲಿ ಆ ಯವನರು ತಮ್ಮ ತಿರಸ್ಕರಣೀಯ ಕೃತಿಗಳಿಂದಲೇ ವಿಚಾರವಂತ ಬಾದಶಹನಿಗೆ ಸರಿದೋರು

ವಂತೆ ಕುಕರ್ಮಗಳ ಯೋಜನೆ ಮಾಡಿ ಬಳಸಹತ್ತಿದರು. ಅವುಗಳಲ್ಲಿ ಒಂದು ಘಟನೆ ಇಂತಿದೆ–

ದಿಲ್ಲಿಯಲ್ಲಿಯ ದುಷ್ಟ ಯುವನನೊಬ್ಬನು ಪ್ರಬಲನಾಗಿ ಕಾಮುಕ ವೃತ್ತಿಯಿಂದ ವರ್ತಿಸುತ್ತಿದ್ದನು. ರಾಜಭಯವನ್ನಾತನು ಲಕ್ಷಿಸುತ್ತಿರಲಿಲ್ಲ. ಅದರಂತೆ ಜನ ಲಜ್ಜೆಯೂ ಅವನಲ್ಲಿರಲಿಲ್ಲ. ಆತನು ಒಂದು ದಿನ ಒಬ್ಬ ಹಿಂದೂ ಸ್ತ್ರೀಯಳ ಮೇಲೆ ಬಲಾತ್ಕಾರ ಪ್ರಯೋಗಿಸಲು ಪ್ರಯತ್ನಿಸಿದನು. ಆದರೆ ಏಕಾಕಿಯಾದ ಆತನಿಗೆ ತನ್ನ ದುಷ್ಕೃಯೆಯು ಸಾಧಿಸಲಿಲ್ಲ. ಆದರೂ ಅವನು ತನ್ನ ಆ ವಿಚಾರದಿಂದ ಪರಾವೃತ್ತನಾಗಲಿಲ್ಲ. ಆ ಸ್ತ್ರೀಯಳನ್ನು ಏನೊಂದು ಹಂಚಿಕೆಯಿಂದ ವಶೀಕರಿಸಿಕೊಳ್ಳುವ ಕಾರ್ಯಕವನ್ನು ನಡೆಯಿಸಿದನು. ತನ್ನ ಸಂಗಡಿಗರನ್ನು ಕೂಡಿಕೊಂಡು ಸಮಯ ಕಾಯ ಹತ್ತಿದನು.

ಆ ಕಾಮುಕನ ದೃಷ್ಟಿಯಲ್ಲಿ ನೆಟ್ಟಿದ್ದ ಆ ಹಿಂದೂ ಸ್ತ್ರೀಯಳು ಒಂದು ದಿನ ಸ್ನಾನಕ್ಕಾಗಿ ನದೀ ತೀರಕ್ಕೆ ಹೋದಳು. ಅದನ್ನು ಕಂಡು ಆ ಯುವನನು ಆಕೆಗೆತಿಳಿಯದಂತೆಹಿಂಬಾಲಿಸಿನಡೆದನು. ಆ ಸ್ತ್ರೀಯಳು ತನ್ನಅರಿವೆಅಂಚಡಿಗಳನ್ನು ಒಗೆದು ಒಣ ಹಾಕಿ ಸ್ನಾನಕ್ಕಾಗಿ ನದಿಯಲ್ಲಿ ಇಳಿದಳು. ಅಷ್ಟರಲ್ಲಿ ಅದಾವಮಾಯೆಯಿಂದಲೋ ಸಮಯ ಕಾಯುತ್ತಿದ್ದ ಆ ಯುವನನು ಒಂದು ಮಾಂಸದ ಗಂಟನ್ನು ಆ ಒಣ ಹಾಕಿದ ಅರಿವೆ ಅಂಚಡಿಗಳಲ್ಲಿ ಬಚ್ಚಿಟ್ಟು ಹಿಂತಿರುಗಿದನು. ಬಳಿಕ ಆತನು ಇಷ್ಟಕ್ಕೆ ಬಿಡದೆ ಲಗು ಬಗೆಯಿಂದ ರಾಜದರಬಾರಿಗೆ ಹೋಗಿ– "ಜೀಯ! ಶ್ರೇಷ್ಠ ಕುಲದ ಹಿಂದೂ ಮಹಿಳೆಯೊಬ್ಬಳು ನದಿಯ ತೀರದಲ್ಲಿ ಕುಳಿತು ಮಾಂಸ ಭಕ್ಷಣ ಮಾಡುತ್ತಿರುವದನ್ನು ನಾನು ಕಂಡುಬಂದೆನು. ಧರ್ಮ ಪ್ರಭುವಿನ ರಾಜ್ಯದಲ್ಲಿ ಉಚ್ಚ ಕುಲದವರು ಈ ರೀತಿ ಅಭಕ್ಷ್ಯಭಕ್ಷಣ ಮಾಡುವದು ಸಯುಕ್ತಿಕವಾಗಲಾರದು" ಎಂದು ದೂರು ಹೇಳಿದನು.

ಆ ಯುವನನು ಈ ಪ್ರಕಾರ ತನಗೆ ಬಂದು ದಾದು ಮುಟ್ಟಿಸಿದ್ದನ್ನು ಕೇಳಿ ರಾಜನು– "ನನ್ನ ರಾಜ್ಯದಲ್ಲಿ ಅದರಲ್ಲಿಯೂ ನನ್ನ ಆಳಿಕೆಯಲ್ಲಿ ಪ್ರತಿಯೊಂದು ಧರ್ಮದವರಿಗೆ ತಮ್ಮ ತಮ್ಮ ಧರ್ಮಕ್ಕೆ ಚ್ಯುತಿ ಬಾರದಂತೆ ವರ್ತಿಸಲು ಅನುಕೂಲತೆ ಕಲ್ಪಿಸಿ ಕೊಟ್ಟಿದ್ದರೂ ಕೆಲವರು ಇನ್ನೂ ತಮ್ಮ ಅಧರ್ಮದಿಂದ ಹೊರತಾಗಿಲ್ಲೆಂಬದು ಈ ಯುವಕನ ಹೇಳಿಕೆಯಿಂದ ವ್ಯಕ್ತವಾಗು

ವದು. ಈ ಪ್ರಕಾರದ ದುರ್ವ್ಯಾಪಾರಗಳನ್ನು ತಡೆಯುವದೇ ಬಾದಶಹನಾದ ನನ್ನ ಮುಖ್ಯ ಕರ್ತವ್ಯ" ಎಂದು ದರಬಾರಿನಲ್ಲಿ ಕೂಡಿದವರಿಗೆಲ್ಲ ಹೇಳಿ ಈ ಕೂಡಲೆ ಆ ಸ್ತ್ರೀಯಳನ್ನು ಬಂಧಿಸಿ ತರತಕ್ಕದ್ದೆಂದು ತನ್ನ ಸೇವಕರಿಗೆ ಆಜ್ಞೆ ಮಾಡಿದನು. ದರಬಾರಿನ ಹಿಂದುಗಳೆಲ್ಲ ಇದನ್ನು ಕೇಳಿ ಕಳವಳಗೊಂಡರು. ಅಹಿಂದುಗಳು ಹಿಂದುಗಳನ್ನು ಕಂಡು ತಿರಸ್ಕಾರ ಭಾವವನ್ನು ಮುಖ ಮುದ್ರೆಯಿಂದ ವ್ಯಕ್ತ ಪಡಿಸಹತ್ತಿದರು. ಆದರೆ ಹಿಂದುಗಳು ಮಾಡುವರೇನು? ಆ ಸ್ತ್ರೀಯಳ ಅಧರ್ಮ ವೃತ್ತಿಯ ವಾರ್ತೆಯನ್ನು ಕೇಳಿ ತಮ್ಮ ತಮ್ಮ ಮನಸ್ಸಿನಲ್ಲಿ ನೊಂದು ಹಳಹಳಿಸಿದರು. ಹಾಗು ಇದರ ಮುಂದಿನ ಪರಿಣಾಮ ಕಾಣಲು ಸ್ತಬ್ಧರಾಗಿ ಕುಳಿತು ಬಿಟ್ಟರು.

ಅಷ್ಟರಲ್ಲಿ ರಾಜಾಜ್ಞೆಯಂತೆ ಹೊಳೆಗೆ ಹೋಗಿದ್ದ ಸೇವಕರು ಆ ಹಿಂದೂ ಸ್ತ್ರೀಯಳನ್ನು ಆವಳು ಒಣಹಾಕಿದ ಅರಿವೆ-ಅಂಚಡಿಗಳೂ ಅವುಗಳಲ್ಲಿ ಬಚ್ಚಿಟ್ಟಿದ್ದ ಮಾಂಸದ ಗಂಟೂ ಸಹಿತವಾಗಿ ಕರೆತಂದು ಬಾದಶಹನೆದುರಿನಲ್ಲಿ ನಿಲ್ಲಿಸಿದರು.

ಬಾದಶಹನು ಆ ಸ್ತ್ರೀಯಳನ್ನು ಕಂಡು ತನ್ನ ಕಣ್ಣಿನಿಂದ ಕೆಂಡ ಕಾರುತ್ತ-"ಎಲೈ! ನೀಚಳೇ! ಉಚ್ಚ ಕುಲದವಳಾದ ನೀನು ಅಭಕ್ಷ್ಯ ಭಕ್ಷಣವನ್ನು ಮಾಡಿರುವಿಯೆಂದು ಈ ನಿನ್ನ ಜೊತೆಗಿದ್ದ ಮಾಂಸದ ಗಂಟಿನಿಂದ ವ್ಯಕ್ತವಾಗುವದು. ಈ ಬಗ್ಗೆ ನಿನ್ನ ಹೇಳಿಕೆ ಏನಿದೆ?" ಎಂದು ಕೇಳಿದನು.

ಬಾದಶಹನ ಉಗ್ರ ಸ್ವರೂಪವನ್ನು ಕಂಡರೂ ಆ ಸ್ತ್ರೀಯಳು ಅದಕ್ಕಂಜದೆ ತನ್ನ ಮೇಲೆಬಂದ ಅಧರ್ಮದಾರೋಪಕ್ಕೆ ಅಂಜಿನಡುಗಹತ್ತಿದಳು. ಈ ಕೃತಕ ಸಂಗತಿಯನ್ನು ಏನೊಂದನ್ನರಿಯದ ಆ ಅಬಲೆಯು ಬಾದಶಹನಿಗೆ ಕೈಮುಗಿದು-"ಪ್ರಭುಗಳೇ! ಇದಾವ ಸಂಗತಿಯೂ ನನಗೆ ಗೊತ್ತಿಲ್ಲ. ನಾವು ಶಾಕಾಹಾರಿಗಳು, ಮಾಂಸ ಭಕ್ಷಣವು ನಮ್ಮ ಜಾತಿಧರ್ಮದಿಂದ ನಿಷಿದ್ಧವೆಂದು ಸರ್ವಶ್ರುತವಿದೆ. ಆದ್ದರಿಂದ ನಾನು ಈ ಮೊದಲಾಗಲಿ, ಈಗಾಗಲಿ ಹಾಗು ಇನ್ನುಮುಂದಾಗಲಿ ಮಾಂಸಭಕ್ಷಣವಂತೂ ಒತ್ತಟ್ಟಿಗಿರಲಿ, ಮಾಂಸವನ್ನು ಕಂಡಿಲ್ಲ, ಮುಟ್ಟಿಲ್ಲ ಹಾಗು ಅದನ್ನು ಕನಸು ಮನಸಿನಲ್ಲಿ ನಿರೀಕ್ಷಿಸುವದಿಲ್ಲ. ಇಂದು ಈ ಮಾಂಸಭಕ್ಷಣದ ಆರೋಪ ನನ್ನಮೇಲೆ ಕೃತಕವಾಗಿ

ಹೊರಿಸಲ್ಪಟ್ಟಿದೆಂಬುದನ್ನು ಸ್ಪಷ್ಟವಾಗಿ ಹೇಳುವೆನು. ಆದರೆ ಅದಾರಿಂದಲೋ ಎಂಬುದನ್ನು ನಾನು ಅರಿಯಲಾರೆನು. ಪ್ರಭುಗಳ ಮುಂದೆ ಬಂದ ಈ ವ್ಯಾಜ್ಯದಲ್ಲಿ ನಾನು ಪೂರ್ಣ ನಿರಪರಾಧಿನಿಯು" ಎಂದು ಹೇಳಿದಳು.

ಕೊನೆಗೆ ಬಾದಶಹನ ಹೇಳಿಕೆಯಂತೆ ಅಲ್ಲಿ ನೆರೆದ ಸಭಿಕರೆಲ್ಲರೂ ಈ ಬಗೆಗೆ ವಿಚಾರಿಸಿದರು. ಅವರಲ್ಲಿ ಬಹುಜನರು ರಾಜನ ವಿಚಾರವನ್ನು ಅನುಸರಿಸಿ ಆ ಸ್ತ್ರೀಯಳ ವಿರುದ್ಧವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಬಳಿಕ ರಾಜನು ಆಕೆಯನ್ನು 'ದೋಷಿ' ಎಂದು ಸಭೆಗೆಸಾರಿ ಘೋರತರವಾದ ಶಿಕ್ಷೆಯನ್ನು ಆಕೆಗೆ ವಿಧಿಸಿದನು.

ಆಯಿತು! ಹಿಂದೂ ಸ್ತ್ರೀಯೊಬ್ಬಳು ಮಾಂಸ ಭಕ್ಷಿಸಿದ ಕಜ್ಜಿಯು ಕೇವಲ ಎರಡೇತಾಸು ನಡೆದು ಮುಕ್ತಾಯಗೊಂಡು ತೀರ್ಪು ಹೊರಬಿದ್ದಿತು. ಧರ್ಮಾಧರ್ಮ ವಿಷಯಕ್ಕೆ ಸಂಬಂಧಿಸಿದ ಈ ಪ್ರಕರಣವು ಎಲ್ಲರಲ್ಲಿ ಕುತೂಹಲವನ್ನು ಹುಟ್ಟಿಸುವಂತಹದಾದುದರಿಂದ ದಿಲ್ಲಿಯಲ್ಲಿಯ ಬಹುಜನರು ಈ ನಿರ್ಣಯ ತಿಳಿಯಲು ಬಂದಿದ್ದರು. ಅವರಲ್ಲಿ ನಮ್ಮ ಕಥಾನಾಯಕ ಬೀರಬಲನೂ ಬಂದು ನ್ಯಾಯನಿರ್ಣಯದ ಮಾದರಿಯನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಅವನು ಈ ಕಜ್ಜಿಯನ್ನು ಮೂಲದಿಂದ ತುದಿಯವರೆಗೆ ಒಳ್ಳೆ ವಿಚಾರದಿಂದ ತಿಳಿದನು. ಹಾಗು ಕೊನೆಗಾದ ರಾಜನ ನಿರ್ಣಯವನ್ನೂ ಕೇಳಿದನು. ಆದರೆ—ಆದರೇನು? ಈ ನ್ಯಾಯವು 'ಕೃತಕ' ಎಂಬುದು ಆ ಸ್ತ್ರೀಯಳೊಬ್ಬಳಿಂದಲೇ ಮಾತ್ರ; ಪ್ರಕಾಶಿತವಾಗಿದ್ದಿತು. ಉಳಿದವರಾರೂ ಅದನ್ನೊಪ್ಪಿರಲಿಲ್ಲ. ಈಗ ಬೀರಬಲನು ಎದ್ದು ನಿಂತು ತನ್ನ ಸಹಜವಾದ ಧೈರ್ಯದಿಂದ "ಭೋ! ರಾಜ! ನೀವು ಈ ಸ್ತ್ರೀಯಳಲ್ಲಿ ಆರೋಪ ಕಲ್ಪಿಸಿ ವಿಚಾರಾಂತ್ಯದಲ್ಲಿ ಈಕೆಗೆ ಶಿಕ್ಷೆಯನ್ನು ವಿಧಿಸಿದಿರಿ. ನಿಮ್ಮ ನ್ಯಾಯನಿರ್ಣಯ ಬುದ್ಧಿಗೆ ನಾನು ಒಪ್ಪುವೆ. ಆದರೆ ಈ ಹೊತ್ತು ನಡೆದು ನಿರ್ಣಿತವಾದ ಈ ವ್ಯಾಜ್ಯದ ಬಗೆಗೆ ನಾನು ಒಂದೆರಡು ಮಾತುಗಳನ್ನು ಹೇಳುವೆ. ನೀವು ಅವಶ್ಯವಾಗಿ ಗಮನಕ್ಕೆ ತಂದುಕೊಳ್ಳುವಿರೆಂದು ನಂಬಿರುವೆನು.

"ರಾಜ! ಈ ವ್ಯಾಜ್ಯೆಯು ಒಬ್ಬ ಕಾಮುಕ ಯುವಕನಿಂದ ತಮ್ಮ ದರಬಾರಿನ ಮುಂದೆ ಬಂದಿದೆ. ಈ ಸ್ತ್ರೀಯಳು 'ಮಾಂಸ ಭಕ್ಷಿಸುವದನ್ನು

ಪ್ರತ್ಯಕ್ಷ ಕಾಣದ ನೀವು ದೊರೆತ ಮಾಂಸದ ಗಂಟಿನ ಆಧಾರದಿಂದ ಹಾಗು ಆ ಯುವಕನ ಹೇಳಿಕೆಯಿಂದ ನಿರ್ಣಯವನ್ನು ನೀಡಿದಿರಿ. ಆದರೆ ನೀವು ಇನ್ನೂ ಇದರ ಸತ್ಯಾ - ಸತ್ಯತೆಯನ್ನು ಸರಿಯಾಗಿ ಅರಿತುಕೊಳ್ಳುವಿರೆಂದು ಆಶಿಸುವೆ"ಎಂದು ಹೇಳಿಮಹಾಪ್ರಭೋ,"ಈ ಸ್ತ್ರೀಯುಳುಮಾಂಸಭಕ್ಷಿಸಿದ್ದನ್ನು ನೋಡಿದೆನೆಂದು ಈ ಯುವಕನ ಹೇಳಿಕೆಯಿದೆ. ಇದು ಈಗ ಎರಡುತಾಸಿನಲ್ಲ ತುದಿಮೊದಲು ಕಂಡ ಸಂಗತಿಯಾಗಿದೆ. ಈಕೆ ಮನಸೇಚ್ಛೆಯಾಗಿ ಭಕ್ಷಿಸಿದ ಮಾಂಸವು ಇನ್ನೂ ಈಕೆಯ ಜಠರದಲ್ಲಿ ಪಚನವಾಗಿರಲಿಕ್ಕಿಲ್ಲ. ಯಾಕಂದರೆ ಮಾಂಸವು ಅರಗಲಿಕ್ಕೆ ೮ ತಾಸು ಬೇಕೆಂದು ಶಾಸ್ತ್ರಜ್ಞರು ಹೇಳುವರು. ಇನ್ನು ನೀವು ಹೆಚ್ಚು ಅವಕಾಶಕ್ಕೆ ಆಸ್ಪದವನ್ನೀಯದೆ ಈಗಲೇ ನಿಮ್ಮ ರಾಜ ವೈದ್ಯರನ್ನು ಕರೆಯಿಸಿ ಅವರಿಂದ ಈಕೆಗೆ ವಮನ-ವಾಂತಿಯಾಗುವ ಔಷಧದ ಯೋಜನೆ ಮಾಡಿರಿ. ಅಂದರೆ ಇವಳು ಮಾಂಸ ಭಕ್ಷಿಸಿದ ಸತ್ಯಾಸತ್ಯತೆಯು ತಿಳಿಯುವದು" ಎಂದು ಸ್ಪಷ್ಟವಾಗಿ ನುಡಿದು ಕುಳಿತನು.

ಬೀರಬಲನು ಆಡಿದ ಗಂಭೀರ ನುಡಿಗಳಿಂದ ಸಭಿಕರೆಲ್ಲರೂ ದಂಗಾಗಿ ಬೊಂಬೆಗಳಂತೆ ಸ್ತಬ್ಧರಾಗಿ ಕುಳಿತರು. ಬಾದಶಹನಿಗಂತೂ 'ನನ್ನ ನಿರ್ಣಯವು ಅಪೂರ್ಣ ವಿಚಾರದಿಂದ ಹೊರಬಿದ್ದಿತಲ್ಲ!' ಎಂಬ ದುಗುಡು ಇಣಿಕಿಹಾಕ ಹತ್ತಿತು. ಕೊನೆಗೆ ಆತನಿಗೆ ಬೀರಬಲನ ಯುಕ್ತಿಯು ಸಮಂಜಸವೆನ್ನಿಸಿ ಆಗಲೇ ರಾಜ ವೈದ್ಯರಿಂದ ಆಕೆಗೆ ವಾಂತಿಯಾಗುವ ಔಷಧ ಕೊಡಿಸಿದನು ಆ ಸ್ತ್ರೀಯಳ ಉದರದಿಂದ ಕೇವಲ ನೀರೇ ಹೊರಬಿದ್ದಿತು. ಇನ್ನಾವ ಅನ್ನಾಂಶವೂ ಕೂಡ ವಾಂತಿಯಲ್ಲಿ ಕಂಡುಬರಲಿಲ್ಲ. ಮಾಂಸವಂತೂ ಇದ್ದಿರಲೇ ಇಲ್ಲ.

ಸಭಿಕರೆಲ್ಲ ಕಂಡರು. ಬಾದಶಹನು ಬೆರಗಾದನು. ಆ ಸ್ತ್ರೀಯಳು ಶಿಕ್ಷೆಯನ್ನನುಭವಿಸದೆ ಮುಕ್ತಳಾದಳು. ಆಕೆಯ ಮೇಲೆ ಆರೋಪ ಹಾಗು ಕಾಮುಕ ದೃಷ್ಟಿಯನ್ನಿಟ್ಟ ಆ ಯವನನು ಬಾದಶಹನು ನೀಡಿದ ಘೋರ ಶಿಕ್ಷೆಗೆ ಗುರಿಯಾದನು. ದರಬಾರವೆಲ್ಲವೂ ಬೀರಬಲನನ್ನು ಕೌತುಕ ದೃಷ್ಟಿಯಿಂದ ನಿರೀಕ್ಷಿಸಹತ್ತಿತು.

ಬಾದಶಹನು ಅಂದಿನಿಂದಲೇ ಬೀರಬಲನ ಪರಿಚಯ ಮಾಡಿಕೊಂಡು ತನ್ನ ದರಬಾರಿನಲ್ಲಿ ಇಟ್ಟುಕೊಂಡನು. ಹಾಗು ಅವನ ಮೇಧಾಶಕ್ತಿಯನ್ನೂ

ಬುದ್ಧಿ ಚಾತುರ್ಯವನ್ನೂ ನಿರರ್ಗಳ ವಾಕ್ಚಾತುರ್ಯವನ್ನೂ ಕಂಡು ಬಾದಶಹನು ತನ್ನ ಪ್ರಸನ್ನ ಚಿತ್ತದಿಂದ ಆತನನ್ನು ಕಾಣಹತ್ತಿದನು.

ಈ ಪ್ರಕಾರವಾಗಿ ಅಕಬರ ಹಾಗು ಬೀರಬಲರ ಪ್ರಥಮ ಪರಿಚಯವು ನಿರಪರಾಧಿ ಸ್ತ್ರೀಯಳೊಬ್ಬಳ ಆರೋಪ ನಿರಸನ ಪ್ರಸಂಗದಿಂದಉಂಟಾಯಿತು. ಹಾಗು ಆ ಪರಿಚಯವೇ ಕೊನೆಯ ವರೆಗೂ ಆ ಉಭಯತರಲ್ಲಿ ಸ್ನೇಹ ಪೂರ್ಣ ಮಿಲನವಾಗಿ ಪರಿಣಮಿಸಿತು.

## ರಾಜದರಬಾರಿನಲ್ಲಿ ಬೀರಬಲನು

**ಅಕಬರನ ಜನ್ಮವು:—** ಅವನ ತಂದೆ ಹುಮಾಯೂನನು ರಾಜ್ಯ ಭ್ರಷ್ಟನಾಗಿ ಕುಟುಂಬ ಸಹಿತ ಚರಿಸುತ್ತಿರುವ ಕಾಲದಲ್ಲಿ ಅರ್ಥಾತ್ ಅಜ್ಞಾತ ಸ್ಥಿತಿಯಲ್ಲಿ ಉಮರಕೋಟ ಎಂಬ ಊರಿನಲ್ಲಾಯಿತು. ಅದರಂತೆ ಅವನ ಬಾಲ್ಯದ ಕೆಲಕಾಲವೂ ಕೂಡ ಅವನ ತಂದೆ-ತಾಯಿಗಳು ನಾಡಾಡಿಗಳಾಗಿ ಅಲೆದಾಡುವ ಸ್ಥಿತಿಯಲ್ಲಿದ್ದಾಗಲೇ ಕಳೆದು ಹೋಯಿತು. ಮುಂದೆ ಹುಮಾಯೂನನು ಕಳೆದು ಹೋದ ತನ್ನ ರಾಜ್ಯವನ್ನು ಪುನಃ ಸಂಪಾದಿಸಿ ಅದನ್ನು ಮೊದಲಿನ ಸ್ಥಿತಿಗೆ ತರುವದರಲ್ಲಿಯೇ ಮನಸ್ಸು ತೊಡಗಿಸಿದನು. ಹಾಗು ರಾಜ್ಯತೃಷ್ಣೆಯಿಂದ ತನ್ನನ್ನು ಕಡುತರವಾಗಿ ವಿರೋಧಿಸುವ ತನ್ನ ಸಹೋದರರಿಂದ ಮಗನ ಜೀವಿತವನ್ನು ಕಾಪಾಡುವದರಲ್ಲಿ ದಕ್ಷತೆ ವಹಿಸಿದನು. ಈ ಎಲ್ಲ ಕಾರಣಗಳಿಂದ ಹುಮಾಯೂನನು ಅಕಬರನ ವಿದ್ಯಾಭ್ಯಾಸದ ಕಡೆಗೆ ಅಷ್ಟೊಂದು ಲಕ್ಷ್ಯವನ್ನು ಪೂರೈಸಲಿಲ್ಲ. ಆದ್ದರಿಂದ ಅಕಬರನು ವಿದ್ಯಾವಂತನಾಗಲಿಲ್ಲ ಎಂದು ಹೇಳಬಹುದು.

ಮುಂದೆ ಅತ್ಯಲ್ಪಕಾಲದಲ್ಲಿಯೇ ಹುಮಾಯೂನನು ಮರಣಹೊಂದಲು ಅಕಬರನು ಚಿಕ್ಕ ಪ್ರಾಯದಲ್ಲಿ ಪಟ್ಟವೇರಿದನು. ತನ್ನ ತಿಳುವಳಿಕೆಯಿಂದ ಆತನು ವಿದ್ಯೆಯ ಮಹತಿಯನ್ನು ಚೆನ್ನಾಗಿ ಅರಿತಿದ್ದನು. ತನಗೆ ಓದು ಬರೆಹ ಬಾರದಿದ್ದರೂ ತನ್ನ ದರಬಾರಿನಲ್ಲಿ ಹಲವು ಪಂಡಿತರಿಗೆ ಆಶ್ರಯ ವನ್ನಿತ್ತು ಅವರಿಂದ ತನಗೆ ಆವಶ್ಯಕವಾದ ಜ್ಞಾನವಮಾಡಿಕೊಳ್ಳುವ ಲವಲವಿಕೆ

ಆತನಲ್ಲಿ ಬಲವತ್ತರವಾಯಿತು. ಅಂತೆಯೇ ಅವನ ದರಬಾರಿನಲ್ಲಿ ದಿಗ್ದೇಶದಲ್ಲಿಯ ನಾಮಾಂಕಿತರಾದ ಪಂಡಿತರ ಸಮಾವೇಶವಾಯಿತು.

ದರಬಾರಿನ ನವರತ್ನಗಳೆಂದು ಪ್ರಸಿದ್ಧಿ ಪಡೆದ (೧) ತೋಡರಮಲ್ಲ (೨) ಮಾನಸಿಂಗ (೩) ಬೀರಬಲ (೪) ಅಬುಲ್‌ಫಜಲ್ (೫) ಫೈಜಿ (೬) ತಾನಸೇನ (೭) ಬದಾವುನಿ (೮) ಮುಲ್ಲಾ ದೊಪ್ಯಾಜಾ ಹಾಗೂ (೯) ಹಕೀಮ ಹುಮಾಮ ಇವರೆಲ್ಲರು ಅಕಬರನ ಆಸ್ಥಾನ ಪಂಡಿತರಾಗಿದ್ದರು. ಇವರಲ್ಲಿ ಬೀರಬಲನ ಸಮಾವೇಶವಿದ್ದಿತೆಂದು ಬೇರೆ ಹೇಳಬೇಕಾಗಿಲ್ಲ. ಈ ವಿದ್ವನ್ಮಣಿಗಳು ಒಂದೊಂದು ಎರಡೆರಡು ವಿಷಯಗಳ ನಿಷ್ಣಾತರಾಗಿದ್ದರೆ ಬೀರಬಲನು ಹಲವು ವಿಷಯಗಳನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದ ಪಂಡಿತನಾಗಿದ್ದನು. ಅರಬ್ಬಿ, ಫಾರ್ಸಿ, ಸಂಸ್ಕೃತ ಭಾಷೆಗಳಲ್ಲಿ ಇವನದು ಆಗಿನ ಕಾಲಕ್ಕೆ ಎತ್ತಿದ ಕೈಯಾಗಿದ್ದಿತು. ಮೇಲಾಗಿ ಅವನಲ್ಲಿಯ ಚತುರತೆ, ಧೀರತೆ, ಹಾಸ್ಯಪ್ರವೃತ್ತಿ, ಸಮಯ ಸೂಚಕತೆ, ಸ್ವಾಮಿಭಕ್ತಿ, ನಿಸ್ಸಂಶಯ ಸ್ಥಿತಿ ಹಾಗು ಧರ್ಮಾತೀತ ವರ್ತನೆ ಇವೆಲ್ಲ ಉತ್ತಮೋತ್ತಮ ಗುಣಗಳು ಬಾದಶಹನ ಲುಬ್ಧತೆಯನ್ನು ತುಷ್ಟಪಡಿಸದಿರಲಿಲ್ಲ. ಬಾದಶಹನು ತಾನು ಹಿಂದಕ್ಕೆ ಕರ್ಣೋಪಕರ್ಣದಿಂದ ಕೇಳಿದ ಶೂರ ವೀರನನ್ನು ಅದರಂತೆ ಪ್ರತ್ಯಕ್ಷ ಹಿಂದೂ ಸ್ತ್ರೀಯರ ಮೇಲೊದಗಿದ ದುರ್ಘಟನೆಯ ಆರೋಪವನ್ನು ತನ್ನ ಮೇಧಾಶಕ್ತಿಯಿಂದ ದೂರ ಮಾಡಿದ್ದನ್ನು ತಾನು ನೋಡಿದ ತರುಣ ಬೀರಬಲನನ್ನು ಮತ್ತೊಂದು ವಿಚಾರ ಮಾಡದೆ ತನ್ನ ದರಬಾರಿನ ನವರತ್ನಗಳಲ್ಲೊಂದು ಅಗ್ರತೆಯ ಸ್ಥಾನದಿಂದ ಸನ್ಮಾನಿಸಿದನು. ಹಾಗು ತಾನು ಆತನನ್ನು ಸದಾವಕಾಲವೂ ತನ್ನ ಜೊತೆಯಲ್ಲಿಯೇ ಇರಿಸಿಕೊಂಡು ಅವನಿಂದ ಸಾಕಷ್ಟು ಜ್ಞಾನಾನುಭವವನ್ನು ಪಡೆದನು. ಕೆಲದಿನಗಳಲ್ಲಿಯೇ ಅವರಿಬ್ಬರಲ್ಲಿ ದೃಢತರವಾದ ಮಿತ್ರತ್ವವುಂಟಾಗಿ "ಅಕಬರ–ಬೀರಬಲ" ರೆಂಬ ಸಾಪೇಕ್ಷನಾಮದ ಬದಲು ' ಪಾಚ್ಛಾ–ಬೀರಬಲ " ಎಂಬ ಮಹತ್ವದರ್ಶಕ ಹೆಸರು ಸ್ಥಿರಗೊಂಡಿತು.

ಇಂತು ಜನ್ಮ ದರಿದ್ರನಾದ ಬೀರಬಲನು ರಾಜಾಬೀರಬಲನಾಗಿ ರಾಜದರಬಾರವನ್ನು ಅಲಂಕರಿಸಿಧನು.

# - ಬಾದಶಹನ ಐದು ಪ್ರಶ್ನೆಗಳು

ಬೀರಬಲನು ಅಕಬರನ ಆಸ್ಥಾನವನ್ನು ಸೇರಿದ ಕೆಲ ದಿನಗಳ ನಂತರ ಬಾದಶಹನ ದರಬಾರವು ನೆರೆಯಿತು. ಬೀರಬಲನಿಗೆ ಇದೇ ಪ್ರಥಮ ದರ ಬಾರವಾಗಿದ್ದಿತು. ಅದರಿಂದ ಅವನು ಅಷ್ಟೊಂದು ಆಧ್ಯತೆಯನ್ನು ವ್ಯಕ್ತ ಪಡಿಸದೆ ಅಪರಿಚಿತ ವ್ಯಕ್ತಿಯಂತೆ ಒಂದೆಡೆಯಲ್ಲಿ ಕುಳಿತು ದರಬಾರಿನ ಸೊಬ ಗನ್ನು ನಿರೀಕ್ಷಿಸುತ್ತಿದ್ದನು. ಅಷ್ಟರಲ್ಲಿ ಬಾದಶಹನು ಬಂದು ಆಕಾಶದಲ್ಲಿಯ ನವಗ್ರಹಗಳಂತೆ ರಂಜಿಸುವ ತನ್ನ ದರಬಾರಿನ ನವರತ್ನಗಳೆನ್ನಿಸಿದ ಪಂಡಿತ ರನ್ನು ಪ್ರಸನ್ನ ಪೂರ್ಣ ದೃಷ್ಟಿಯಿಂದ ನಿರೀಕ್ಷಿಸಿ ಸ್ಥಾನಾಪನ್ನನಾದನು.

ಪದ್ಧತಿಯಂತೆ ದರಬಾರಿನ ಕಾರ್ಯಕ್ರಮಗಳಿಗಾರಂಭವಾಯಿತು. ಆಗ ಬಾದಶಹನು ತನ್ನ ಸಭೆಯ ಪಂಡಿತರ ಮುಖ್ಯವಾಗಿ ಬೀರಬಲನ ಜಾಣ್ಮೆ ಯನ್ನು ಪರೀಕ್ಷಿಸುವ ಉದ್ದೇಶದಿಂದ ಅವರೆಲ್ಲರನ್ನು ಕುರಿತು– "ಎಲೈ ವಿದ್ವ ನ್ಮಣಿಗಳೆ! (೧) ಹೂಗಳಲ್ಲೆಲ್ಲ ಶ್ರೇಷ್ಠವಾದುದಾವುದು? (೨) ಹಲ್ಲುಗಳಲ್ಲಿ ಮಿಗಿಲಾದುದಾವುದು ? (೩) ಈ ಜಗತ್ತಿನಲ್ಲಿ ಅದಾರ ಮಗನು ಹೆಚ್ಚಿನ ವನು? (೪) ರಾಜರುಗಳಲ್ಲೆಲ್ಲ ದೊಡ್ಡ ರಾಜನಾರು? ಹಾಗು (೫) ಗುಣಗಳ ಲ್ಲೆಲ್ಲ ಅನುಪಮಿತವಾದದ್ದಾವುದು? ಈ ಪ್ರಕಾರವಾಗಿ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳಿರಿ" ಎಂದು ಕೇಳಿದನು.

ಬಾದಶಹನ ಪ್ರಶ್ನೆಗಳನ್ನು ಕೇಳಿಕೊಂಡು ಸಭೆಯ ಪಂಡಿತರು ಒಬ್ಬೊ ಬ್ಬರಾಗಿ ಹಾಗು ಜೊತೆ ಜೊತೆಯವರಾಗಿ ವಿಚಾರಿಸಹತ್ತಿದರು. ಬಹು ಜನ ಪಂಡಿತರು ಒಟ್ಟಾಗಿ ಬಾದಶಹನ ಐದೂ ಪ್ರಶ್ನೆಗಳಿಗೆ ಕ್ರಮವಾಗಿ (೧) ಗುಲಾಬೀ ಹೂವು (೨) ಆನೆಯ ಹಲ್ಲು (೩) ರಾಜ ಪುತ್ರನು (೪) ರಾಜಾ ಧಿರಾಜನು ಹಾಗು (೫) ವಿದ್ವತ್ತೆಯು ಎಂಬದಾಗಿ ಉತ್ತರವನ್ನು ಹೇಳಿದರು.

ಬಾದಶಹನು ಪಂಡಿತರಿಂದ ದೊರೆತ ಉತ್ತರಗಳಿಗೆ ಒಪ್ಪಿಗೆಯನ್ನೀಯ ಲಾರದವನಾಗಿದ್ದರೂ ಅದನ್ನು ಬಹಿರಂಗ ಪಡಿಸದೆ ತನ್ನ ಹಸನ್ಮುಖದಿಂದ ಅವನ್ನು ಸ್ವಾಗತಿಸಿದಂತೆ ನಟಿಸಿದನು. ಮತ್ತು ಆ ಕೂಡಲೆ ಆತನು ಒತ್ತಟ್ಟಿಗೆ ಸ್ತಬ್ಧನಾಗಿ ಕುಳಿತಿದ್ದ ಬೀರಬಲನನ್ನು ಕುರಿತು– "ಬೀರಬಲರೆ! ನಮ್ಮ ಪ್ರಶ್ನೆಗಳಿಗೆ ಈ ಪಂಡಿತರು ಕೊಟ್ಟ ಉತ್ತರಗಳು ನಿಮಗೂ ಸಮ್ಮತವಿರಬಹು

ದೆಂದು ನಿಮ್ಮ ಮೌನತ್ವದಿಂದ ನಾವು ತಿಳಿದುಕೊಳ್ಳಲು ಆತಂಕವೇನು?" ಎಂದು ಕೇಳಿದನು.

ಬೀರಬಲನು ದರಬಾರಿಗೆ ಹೊಸಬನಾಗಿದ್ದರೂ ಅವನ ಸ್ಪಷ್ಟೋಕ್ತಿಗಳೂ ಧೈರ್ಯವೂ ಹಳೆಯವೇ ಆಗಿದ್ದವು. ಬಾದಶಹನು ತನ್ನನ್ನು ಸ್ವತಂತ್ರವಾಗಿ ಉತ್ತರಗಳ ಬಗೆಗೆ ವಿಚಾರಿಸಿದ್ದರಿಂದ ಆ ಕೂಡಲೆ ಎದ್ದು ನಿಂತು- "ಮಹಾ ಪ್ರಭೋ! ಈ ಪಂಡಿತರೆಲ್ಲರ ಉತ್ತರಗಳು ಹೇಗೋ ಇರಲಿ. ನನ್ನ ಮಟ್ಟಿಗೆ ಹಾಗು ನಿಜಕ್ಕನುಸರಿಸಿ ತಮ್ಮ ಪ್ರಶ್ನಗಳ ಉತ್ತರಗಳು ಕ್ರಮವಾಗಿ (೧) ಹತ್ತಿ ಹೂವು (೨) ನೇಗಿಲ ಹಲ್ಲು (೩) ಗೋವಿನ ಮಗನು (೪) ಮೇಘರಾಜನು ಹಾಗು (೫) ಧೈರ್ಯವೆಂಬ ಗುಣವು. ಇವಾಗಿರುವವು. ಪ್ರಭುಗಳ ಪ್ರಶ್ನ ವಿಚಾರಕ್ಕೆ ಇವು ಸರಿದೋರಿದರೆ ಹಾಗು ಈ ಸಭಾಭೂಷಿತ ವಿದ್ವಾಂಸರಿಗೆ ಒಪ್ಪಿಗೆಯಾದರೆ ನನ್ನ ಉತ್ತರಗಳನ್ನು ಸ್ವೀಕರಿಸುವದು" ಎಂದು ಹೇಳಿ ಕುಳಿತುಕೊಂಡನು.

ಬೀರಬಲನ ಜಾಣ್ಮನದ ಉತ್ತರಗಳಿಂದ ಬಾದಶಹನು ಸಂತುಷ್ಟತೆ ಹೊಂದಿ ಆತನನ್ನು ಮರ್ಯಾದಿಸಿದನು. ಕೂಡಿದ ವಿದ್ವನ್ಮಣಿಗಳಲ್ಲಿ ಕೆಲವರು ಮಾತ್ರ ಬಾದಶಹನಿಂದ ಬೀರಬಲನಿಗಾದ ಉತ್ತೇಜನಕ್ಕಾಗಿ ಅಸೂಯೆ ಪಟ್ಟರೂ ಬಹು ಜನರು ಆತನನ್ನು ಸ್ನೇಹದಿಂದ ಕಾಣ ಹತ್ತಿದರು.

## ೨೭—೯=೦

ಅಕಬರ ಬಾದಶಹನ ದರಬಾರೆಂದರೆ ಅದು ಸಾಮಾನ್ಯತರದಿಂದ ನೆರೆಯತಕ್ಕದುದಲ್ಲ. ದರಬಾರಿಗಾಗಿ ಆಮಂತ್ರಿಸಿದವರೆಲ್ಲರೂ, ಪ್ರೇಕ್ಷಕರೂ ಎಲ್ಲ ಜಾತಿ-ಪಂಥಗಳ ಜನರೂ ಆಗಮಿಸಿ ದರಬಾರವನ್ನು ಅಲಂಕರಿಸುತ್ತಿದ್ದರು. ಮನರಂಜನವಾದ ಕಾರ್ಯಕ್ರಮಗಳು, ಹೃದಯವನ್ನು ಹಿಡಿಯುವ ಹೇಳಿಕೆ-ಕೇಳಿಕೆಗಳು, ಶೂರರಿಗೂ ಪಂಡಿತರಿಗೂ ದೊರೆಯುವ ಭೂಷಣ-ಮರ್ಯಾದೆಗಳೂ ಮುಂತಾದವೆಲ್ಲವೂ ವೆಗ್ಗಳವಾಗಿ ನಡೆಯುತ್ತಿದ್ದವೆಂದಮೇಲೆ ಕೇಳುವದೇನು? ದರಬಾರಿನ ಸಮಯವೆಂದರೆ ಎಲ್ಲರೂ ಉತ್ಸುಕತೆಯಿಂದ ಅದನ್ನು ಕಾಯ್ದುಕೊಂಡೇ ಇರುತ್ತಿದ್ದರು. ಅಂದಮೇಲೆ ಸದಾವಕಾಲವೂ ಆ ಬಾದಶಹನ ದರಬಾರವು ನೆರೆಯುತ್ತಲೇ ಇದ್ದಿತು.

ಹೀಗಿದ್ದರೂ ಕೂಡ ಅದಾವ ಕಾರಣದಿಂದಲೋ ಒಂದು ದಿನದ ದರಬಾರು ಶೂನ್ಯಮಯವಾಗಿ ಪರಿವರ್ತಿಸಿತು. ಪಂಡಿತರಂತೂ ಇದ್ದೇ ಇದ್ದರು. ಪ್ರೇಕ್ಷಕರ ಸಂಖ್ಯೆಯು ತೀರ ಅತ್ಯಲ್ಪವಿದ್ದಿತು. ಬಾದಶಹನು ನಿಯಮಿತ ವೇಳೆಗೆ ಬಂದು ನೆರೆದವರನ್ನು ನಿರೀಕ್ಷಿಸಿ ಕುಳಿತನು. ಆಗಲಾತನು ತನ್ನ ಪಂಡಿತರನ್ನುಕುರಿತು-"೨೭ ರಲ್ಲಿ ೯ ನ್ನು ಕಳೆದರೆ ಉಳಿಯುವದೆಷ್ಟು?" ಎಂಬ ಗಣಿತದ ಪ್ರಶ್ನೆಯೊಂದನ್ನು ಮಾಡಿದನು. ಕೆಲಪಂಡಿತರು 'ಇದಾವ ದೊಡ್ಡ ಪ್ರಶ್ನೆ ೧೮ ಎಂದು ಶಾಲೆಗೆ ಹೊಸದಾಗಿ ಹೋಗುವ ಬಾಲಕರು ಸಹಜ ಉತ್ತರ ಕೊಡುವರೆಂದು ಹೇಳಿದರು. ಬೇರೆ ಕೆಲವು ಪಂಡಿತರು ಅಂದು ಸಭೆಗೂಡಿದ ಜನರನ್ನೆಣಿಸಿಕೊಂಡು ಒಟ್ಟ ೨೭ ಜನರು ಸಭೆಯಲ್ಲಿರುವರು. ಇವರಲ್ಲಿ ನವರತ್ನಗಳೆನ್ನಿಸಿದ ನಾವು ೯ ಜನರನ್ನು ಬಿಟ್ಟರೆ ಉಳಿದ ೧೮ ಜನರು ಸಭೆಗೆ ಬಂದವರು ಎಂದು ಉತ್ತರಿಸಿದರು.

ಬಾದಶಹನು ಆ ಪಂಡಿತರ ಉತ್ತರಕ್ಕೆ ತನ್ನ ಒಪ್ಪಿಗೆಯನ್ನೀಯಲಿಲ್ಲ. ಹಾಗು ಆತನು ಬೀರಬಲನನ್ನು ಕುರಿತು-'ಬಿರೀಬಲ! ನಿಮ್ಮ ಉತ್ತರವೆಷ್ಟು?' ಎಂದು ಕೇಳಿದನು. ಕೂಡಲೆ ಬೀರಬಲನು ಎದ್ದು ನಿಂತು-"ಜೀಯ! ಶೂನ್ಯ" ಎಂದು ಉತ್ತರ ಕೊಟ್ಟನು. ಅದನ್ನು ಕೇಳಿದ ಕೂಡಲೆ ಬಾದಶಹನು-'ಬೀರಬಲರ ಉತ್ತರವು ಸರಿಯಿದೆ' ಎಂದು ಸಭೆಗೆ ಸಾರಿದನು.

ಕೂಡಿದ ಪಂಡಿತರೆಲ್ಲರು ಬೀರಬಲನನ್ನು ಕುರಿತು-'ಬೀರಬಲರೆ! ನೀವು ಶಾಲೆಯಲ್ಲಿ ಸಂಕಲನ-ವ್ಯವಕಲನಗಳನ್ನು ಕಲಿತಿರುವದಿಲ್ಲವೆಂಬಂತೆ ತೋರುವದು' ಎಂದು ಹಾಸ್ಯಮಾಡಹತ್ತಿದರು. ಅದನ್ನು ಕಂಡು ಬಾದಶಹನು ಬೀರಬಲನಿಗೆ-"ಬೀರಬಲರೆ! ನಿಮ್ಮ ಉತ್ತರದ ಸಮತ್ವವನ್ನು ಈ ಪಂಡಿತರಿಗೆ ತೋರಿಸಿಕೊಡಿರಿ" ಎಂದು ಹೇಳಿದನು.

ಆಗ ಬೀರಬಲನು ಎದ್ದು ನಿಂತು-ಪ್ರಭುಗಳೇ! ಹಾಗು ಪಂಡಿತರೆ ೨೭ ಇದು ನಕ್ಷತ್ರ ಸಂಜ್ಞಕ ಸಂಖ್ಯೆಯು. ೯ ಇದು ಮಳೆಯ ಸಂಜ್ಞಕ ಸಂಖ್ಯೆಯು. ಇಡೀ ವರುಷದಲ್ಲಿ ಸೂರ್ಯನು ಈ "೯ ನಕ್ಷತ್ರಗಳಲ್ಲಿ ಪ್ರವೇಶ ಮಾಡಿ ಮಳೆ ಸುರಿಸುವನು. ಉಳಿದ ನಕ್ಷತ್ರಗಳಿಂದ ಮಳೆ ಬೀಳುವದಿಲ್ಲ. ಅಂದ ಮೇಲೆ ಈ ಒಂಭತ್ತು ಮಳೆಯ ನಕ್ಷತ್ರಗಳನ್ನು ದಾಟಿದ ಕೂಡಲೆ

ವರ್ಷವೇ ಮುಗಿಯುವದು. ಇದರ ಮೇಲಿಂದ ೨೭ ರಲ್ಲಿ ೯ ಕಳೆಯಲು ಶೂನ್ಯ ಎಂದು ಹೇಳುವದು ಯೋಗ್ಯವು" ಎಂದನು.

ಬೀರಬಲನ ಉತ್ತರವು ಎಲ್ಲರಿಗೂ ಸರಿಯೆನ್ನಿಸಿತು.

## ಬೀರಬಲನ ಧೈರ್ಯ ಪರೀಕ್ಷೆ

ಅಕಬರ ಬಾದಶಹನು ಬೀರಬಲನಲ್ಲಿಯ ಗುಣಗಳನ್ನು ಸೂಕ್ಷ್ಮ ಬಗೆಯಿಂದ ಪರೀಕ್ಷಿಸಿ ಅವನನ್ನು ತನ್ನ ಆಶ್ರಯದಲ್ಲಿ ಇರಿಸಿಕೊಂಡನು. ಹಾಗು ಆತನನ್ನು ದರಬಾರಿನ ಉಳಿದ ಪಂಡಿತರಿಗಿಂತ ಹೆಚ್ಚು ಮರ್ಯಾದೆಯಿಂದ ಕಾಣಹತ್ತಿದನು. ಇದು ಬಾದಶಹನ ನಿಕಟ ಸಂಬಂಧಿಗಳಾದ ಕೆಲವು ಅಹಂಮನ್ಯರಿಗೆ ಸರಿಬೀಳಲಿಲ್ಲ. ಏನಾದರೊಂದು ಪ್ರಸಂಗವನ್ನು ಹುಡುಕಿ ಆದರಿಂದ ಬೀರಬಲನಮೇಲಿದ್ದ ಬಾದಶಹನ ಪ್ರೇಮವನ್ನುವಿಚಲಗೊಳಿಸುವ ಹವ್ಯಾಸದಲ್ಲಿದ್ದರು.

ಬೀರಬಲನು ದರಬಾರವನ್ನು ಪ್ರವೇಶ ಮಾಡಿದ ಪ್ರಥಮ ದಿನದಲ್ಲಿ ಬಾದಶಹನ ಐದೂ ಪ್ರಶ್ನೆಗಳಿಗೆ ಯೋಗ್ಯ ಉತ್ತರ ಕೊಟ್ಟು ಮನ್ನಣೆಪಡೆದ ಸಂಗತಿಯು ಹಿಂದೆ ಬಂದಿದೆ. ಅದರಲ್ಲಿ ಅವನು "ಧೈರ್ಯವು ದೊಡ್ಡ ಗುಣವು" ಎಂಬದಾಗಿ ಹೇಳಿದ ಸಂಗತಿಯನ್ನು ಮುಂದು ಮಾಡಿ ಕೆಲ ಕುಹಕರು ಬಾದಶಹನ ಬಳಿಗೆ ಹೋಗಿ— "ಜೀಯ! ಬೀರಬಲನು ಕೇವಲ ಬಾಯ್ಮಾತಿನ ಬಂಟನು. ಧೈರ್ಯವು ಅವನಲ್ಲಿ ಸ್ವಲ್ಪವೂ ಸಹಇರುವದಿಲ್ಲ. ಆದರೆ ಪ್ರಭುಗಳಾದ ತಮ್ಮೆದುರಿನಲ್ಲಿ ಆತನು ಧೈರ್ಯವು ದೊಡ್ಡಗುಣವು ಎಂದು ಹೇಳಿ ಮರ್ಯಾದೆಪಡೆದನೇ ಹೊರತು ಧೀರತನದಿಂದ ಪ್ರಸಂಗವನ್ನೆದುರಿಸಿ ತಮ್ಮಿಂದ ಹೊಗಳಿಸಿಕೊಳ್ಳಲಿಲ್ಲ. ನಿಜಕ್ಕೂ ಆತನು ಹೇಡಿಯು. ಈ ಮಾತಿನ ಸತ್ಯತೆಯನ್ನು ಗುಣಲುಬ್ಧರಾದ ತಾವು ಮನಗಾಣತಕ್ಕದ್ದು" ಎಂದು ಹೇಳಿದರು. ಬಾದಶಹನಿಗಾದರೂ ಬೀರಬಲನ ಧೈರ್ಯವನ್ನು ಕಾಣುವ ಲವಲವಿಕೆಯಿದ್ದಿತು. 'ಯಾಕಾಗಲೊಲ್ಲದು' ಎಂದು ಅವರಿಗೆ ಆಶ್ವಾಸನ ನೀಡಿ ಕಳಿಸಿದನು.

ಇಷ್ಟಾದ ಕೆಲ ದಿನಗಳ ತರುವಾಯ ಬಾದಶಹನು ಬೀರಬಲನ ಧೈರ್ಯವನ್ನು ಒರೆಗ್ಗಚ್ಚುವದಕ್ಕಾಗಿ ತನ್ನ ಮಾವುತನನ್ನು ಕರಿಸಿ ಆತನಿಗೆ— ನೀನು

ಬೀರಬಲನು ಇಕ್ಕಟ್ಟಾದ ಓಣಿಯಿಂದ ಹಾದುಬರುತ್ತಿರುವಾಗ ಅವನ ಮೇಲೆ ಮದ್ದಾನೆಯನ್ನು ನೂಕಿಬಿಡು' ಎಂದು ಅಪ್ಪಣೆ ಮಾಡಿದನು.

ಮರುದಿನವೇ ಬೀರಬಲನು ತನ್ನ ಮನೆಯಿಂದ ಒಂದು ಸಂದಿಯ ಓಣಿಯಿಂದ ಹಾದು ಬರುವಾಗ ರಾಜಾಜ್ಞೆಯಂತೆ ಮಾವುತನು ಅವನ ಮೈ ಮೇಲೆ ಮದ್ದಾನೆಯನ್ನು ಏರಿ ಬಿಟ್ಟನು. ಅದನ್ನು ಕಂಡ ಕೂಡಲೆ ಬೀರ ಬಲನು ಅತ್ತಿತ್ತ ಸುಳಿಯದೆ ನಿಂತಲ್ಲಿಯೇ ನಿಂತು ಅದರ ಕಾಟ ತಪ್ಪಿಸುವ ಯೋಚನೆ ಮಾಡಹತ್ತಿದನು. ಅಷ್ಟರಲ್ಲಿ ಮದ್ದಾನೆಯ ರಭಸಕ್ಕೆ ಅಂಜಿ ತನ್ನ ಕಡೆಗೆ ಓಡಿ ಬರುತ್ತಿರುವ ಒಂದು ಬೀದಿಯ ನಾಯಿಯನ್ನು ಕಂಡನು. ಅದು ಸಮೀಪಕ್ಕೆ ಬಂದ ಕೂಡಲೆ ಆತನು ಅದರ ಹಿಂಗಾಲುಗಳೆರಡನ್ನೂ ಹಿಡಿದು ಎತ್ತಿ ತನ್ನ ಮೇಲೆ ಸಾಗಿ ಬರುತ್ತಿರುವ ಆನೆಯ ಗಂಡಸ್ಥಳಕ್ಕೆ ನೋಡಿ ಬೀಸಿದನು. ಇದರಿಂದ ಆ ನಾಯಿಯು ಗಾಬರಿಯಾಗಿ ತಾನೆಲ್ಲಿ ಕೆಳಗೆ ಬೀಳುವೆನೋ ಎಂಬ ಭಯದಿಂದ ಆನೆಯ ಗಂಡಸ್ಥಳವನ್ನು ಗಟ್ಟಿ ಯಾಗಿ ಹಿಡಿದುಕೊಂಡಿತು. ಇದರಿಂದ ಆ ಮದ್ದಾನೆಯು ಕೂಡ ಬೆದರಿ ಹಿಂತಿರುಗಿ ದಿಕ್ಕೆಟ್ಟು ಓಡಹತ್ತಿತು. ಇದನ್ನೆಲ್ಲವನ್ನು ಬಾದಶಹನು ತನ್ನ ಅಂತಸ್ತಿನಿಂದ ನೋಡಿ ಬೆರಗಾದನು.

ಮುಂದೆ ಬೀರಬಲನು ನಿರಾತಂಕವಾಗಿ ಆ ಇಕ್ಕಟ್ಟಿನ ಮಾರ್ಗದಿಂದ ಪಾರಾಗಿ ಅರಮನೆಗೆ ಬಂದು ಬಾದಶಹನನ್ನು ಕಂಡನು.

ಅಷ್ಟರಲ್ಲಿ ಮಾವುತನು ಬಂದು ತಾನು ಬೀರಬಲನ ಮೇಲೆ ಮದ್ದಾನೆ ನೂಕಿದ್ದನ್ನೂ ಬೀರಬಲನು ಆಗ ತೋರಿಸಿದ ಧೈರ್ಯವನ್ನೂ ಒಳ್ಳೆರುಚಿಕಟ್ಟಾಗಿ ವರ್ಣಿಸಹತ್ತಿದನು. ಬಾದಶಹನ ಪರಿಸರದಲ್ಲಿದ್ದ ಹಾಗು ಆತನಿಗೆ ಮೊದಲು ಈ ವಿಚಾರವನ್ನು ಹೇಳಿದ ಕುಹಕರು ಅಲ್ಲಿಯೇ ಇದ್ದರು. ಇದನ್ನು ಕೇಳಿ ಅವರು ತಲೆ ತಗ್ಗಿಸಿ ನಿಂತರು.

ಬಾದಶಹನು ತನ್ನಲ್ಲಿ ಬಂದ ಧೀರ ಬೀರಬಲನನ್ನು ಮರ್ಯಾದೆಯಿಂದ ಕಂಡು ಹಸನ್ಮುಖದಿಂದ ಆತನನ್ನು ಸ್ವಾಗತಿಸಿದನು.

# — ಸಟಿ-ದಿಟಗಳಲ್ಲಿಯ ಅಂತರ —

ಬಾದಶಹನ ದರಬಾರಿನೆದುರಿಗೆ ದಿನದಿನವೂ ಅದೆಷ್ಟೋ ನ್ಯಾಯ-ನಿಗದಿಗಳು ನಿರ್ಣಯಕ್ಕಾಗಿ ಬರುತ್ತಿರುವವು. ಅವುಗಳಲ್ಲಿ ಸತ್ಯವಾದವು ಯಾವವು? ಅಸತ್ಯತೆಯಿಂದ ಕೂಡಿದವು ಯಾವವು? ಇವಾವವೂ ತಿಳಿಯುವದು ಆತನಿಗೆ ಕಠಿಣತೋರಹತ್ತಿತು. ಒಮ್ಮೊಮ್ಮೆ ನಿಜ ಸಂಗತಿಗಳು ಸುಳ್ಳಾಗಬಹುದು; ಸುಳ್ಳು ಸಂಗತಿಗಳು ಸಾಕ್ಷಿ ಮುಂತಾದವುಗಳಿಂದ ನಿಜ ಸಂಗತಿಗಳಂತೆ ರೂಪುಗೊಳ್ಳಬಹುದು. ಹೀಗಾಗಿ ಆ ಬಾದಶಹನನ್ನು ಪಾಪ ಭೀರುತೆಯು ಪೀಡಿಸಹತ್ತಿತು. ಸತ್ಯಾಸತ್ಯತೆಗಳಲ್ಲಿ ನಿಜವಾದ ಅಂತರವಿರದಿರಬಹುದೇ? ಎಂಬ ಸಂದೇಹವು ಅವನನ್ನು ಆವರಿಸಿತು. ಈ ಸಂಶಯ ನಿವಾರಣೆ ಮಾಡಿಕೊಳ್ಳುವ ಕುರಿತು ಆತನು ಒಂದು ದಿನ ತನ್ನ ದರಬಾರಿನಲ್ಲಿಯ ಪಂಡಿತರನ್ನು ಕುರಿತು— "ಸಟಿ–ದಿಟಗಳಲ್ಲಿ ಅಂತರವಿದೆಯೆ? ಇದ್ದರೆ ಅದೆಷ್ಟಿರುವದು?" ಎಂದು ಪ್ರಶ್ನೆಮಾಡಿದನು.

ಬಾದಶಹನ ಪ್ರಶ್ನೆಯ ಗೂಢಾರ್ಥವು ಅದೆಷ್ಟೋ ಜನರಿಗೆ ತಿಳಿಯದೆ ಹೋಯಿತು. ಕೆಲವರು ಮಾತ್ರ ಮೂಗಿನ ಮೇಲೆ ಬೆರಳನ್ನಿಟ್ಟು ವಿಚಾರಿಸಿಕೊಂಡು— 'ಪ್ರಭೊ! ಸತ್ಯಾಸತ್ಯತೆಗಳಲ್ಲಿ ಅಂತರವುಂಟೆಂಬ ಮಾತನ್ನು ಎಲ್ಲರೂ ಒಪ್ಪತಕ್ಕದ್ದೇ ಸರಿ. ಆದರೆ ಆ ಅಂತರದ ಮರ್ಯಾದೆಯು ತೀರ ಕಡಿಮೆಯೆಂದರೆ ಭೂಮ್ಯಾಕಾಶಗಳ ನಡುವಿನ ಅಂತರದಷ್ಟು ಇರುವದೆಂದು ಹೇಳಲಡ್ಡಿಯಿಲ್ಲ' ಎಂದರು. ಮತ್ತೆ ಕೆಲವರು— 'ಸತ್ಯ ಮತ್ತು ಅಸತ್ಯಗಳು ಒಂದಕ್ಕೊಂದು ವಿರೋಧ ಧರ್ಮ ಯುಕ್ತವಾದವುಗಳಾದುದರಿಂದ ಅವೆರಡರ ನಡುವಿನ ಅಂತರವು ನಾವು ಕಲ್ಪಿಸಿದಕ್ಕಿಂತಲೂ ಹೆಚ್ಚೆಚ್ಚು ಆಗುವದೇ ಹೊರತು ಕಡಿಮೆಯಾಗಲಾರದು' ಎಂದು ಉತ್ತರಿಸಿದರು.

ಈ ಎರಡೂ ವರ್ಗದವರ ಉತ್ತರಗಳಿಂದ ಬಾದಶಹನು ವೈಚಾರಿಕ ಪರಿವರ್ತನೆಯಾದಂತಾಗದೆ ಕೆಲ ಹೊತ್ತು ಸುಮ್ಮನೆ ಕುಳಿತನು. ಬಳಿಕ ಆತನು ಒಮ್ಮೆಲೆ ಬೀರಬಲನನ್ನು ದೃಷ್ಟಿಸಿ— 'ಬೀರಬಲರೆ ಇದಕ್ಕೆ ನಿಮ್ಮ ಹೇಳಿಕೆ ಏನು?' ಎಂದು ಕೇಳಿದನು.

ಕೂಡಲೆ ಬೀರಬಲನು ಎದ್ದು ನಿಂತು— "ಪ್ರಭೊ! ಸತ್ಯಕ್ಕೂ ಅಸತ್ಯಕ್ಕೂ ಅಂತರವಿದೆಯೆಂದು ಎಲ್ಲರೂ ಹೇಳುವಂತೆ ನಾನೂ ಹೇಳುವೆನು. ಆದರೆ ಅವರಂತೆ ನನ್ನ ಅಳತೆಯ ಕೋಲು ಅಷ್ಟೊಂದು ದೊಡ್ಡದಿಲ್ಲ. ಕೇವಲ ನನ್ನ ಕೈ ಬೆರಳುಗಳಿಂದ ಅವೆರಡರ ಅಂತರವನ್ನು ಅಳೆದರೆ 'ನಾಲ್ಕೇ ಬೆರಳು' ಆಗುವದು" ಎಂದು ಹೇಳಿದನು.

ಬೀರಬಲನ ಉತ್ತರದಿಂದ ಬಾದಶಹನು ನಕ್ಕು— "ಬೀರಬಲರೆ! ಅದು ಹೇಗೆ" ಎಂದು ಕೇಳಿದನು.

ಆಗ ಬೀರಬಲನು— "ಜೀಯಾ! ದೇವರು ನಮಗೆ ದಯಪಾಲಿಸಿರುವ ಜ್ಞಾನೇಂದ್ರಿಯಗಳಲ್ಲಿ ಕಣ್ಣು ಹಾಗು ಕಿವಿ ಇವೆರಡರಿಂದ ಕ್ರಮವಾಗಿ ಸತ್ಯ ಮತ್ತು ಅಸತ್ಯತೆಗಳ ಮರ್ಮವನ್ನು ಅರಿಯಬಹುದು. ಅದು ಹೇಗೆಂದರೆ—

ನಾವು ಯಾವುದನ್ನು ನಮ್ಮ ಕಣ್ಣುಗಳಿಂದ ನೋಡುವೆವೋ ಅದುವೇ ಸತ್ಯ; ಅದರಂತೆ ನಾವು ಯಾವುದನ್ನು ಕಿವಿಗಳಿಂದ ಕೇಳುವೆವೋ ಅದುವೇ ಅಸತ್ಯ" ಎಂದು ಹೇಳಲು ಬಾದಶಹನು ಬೀರಬಲನ ಈ ಸಿದ್ಧಾಂತ ನುಡಿಗಳಿಗೆ ಒಳ್ಳೆ ಹರ್ಷಿತನಾದನು.

## ರಾಜಶಾಲಕ ಹಮೋದಸಾಹೇಬ

ಬೀರಬಲನು ದರಬಾರಿನಲ್ಲಿ ಸೇರಿ ಬಾದಶಹನ ಪ್ರೀತಿಗೆ ಪಾತ್ರನಾದ ಮಂತ್ರಿಯಾದುದು ಎಷ್ಟೋ ದರಬಾರಿನ ಅಧಿಕಾರಿಗಳ ಮನಸ್ಸನ್ನು ಕೊಳ್ಳಲಿಲ್ಲ. ಆತನೊಡನೆ ಬಾದಶಹನು ಒಳ್ಳೆ ಸ್ನೇಹದಿಂದ ವರ್ತಿಸುವದನ್ನು ಅವರು ಸಹಿಸದಾದರು. ಏಕಛತ್ರಾಧಿಪನಾದ ಯವನ ಬಾದಶಹನು ಯಃಕಶ್ಚಿತ ಹಿಂದೂ ಮಂತ್ರಿಯನ್ನು ಕಾಲಕಾಲಕ್ಕೆ ಮರ್ಯಾದಿಸುವದು ಇದೆಲ್ಲಿಯ ನ್ಯಾಯ! ಎಂಬ ಸಂಕುಚಿತ ಭಾವನೆಯುಳ್ಳವರಾದ ಅವರು ಬಾದಶಹನಿಂದ ಬೀರಬಲನನ್ನು ದೂರ ಮಾಡುವ ಯೋಚನೆಯನ್ನು ಮಾಡಹತ್ತಿದರು.

ಬಾದಶಹನ ಜನಾನಾಖಾನೆಯಲ್ಲಿಯ ಸಾವಿರಾರು ಜನ ಹೆಂಗಸರು ಅಕಬರನ ಸಹಧರ್ಮಿಣಿಯರೆಂದು ತಿಳಿಯಲ್ಪಡುತ್ತಿದ್ದರು. ಇಷ್ಟು ಜನ ಹೆಂಡರಿದ್ದರೂ ಆತನು ತನ್ನ ಪಟ್ಟದರಾಣಿಯನ್ನು ತನ್ನ ಹೃದಯದಿಂದ

ದೂರೀಕರಿಸದೆ ಯಾವಾಗಲೂ ಅವಳಸಂತುಷ್ಟತೆಗಾಗಿ ಪ್ರಯತ್ನಿಸುತ್ತಿದ್ದನು. ತಾನು ಬಹಿರಂಗವಾಗಿ ಸಾರ್ವಭೌಮ ಬಾದಶಹನೆನ್ನಿಸಿಕೊಳ್ಳುತ್ತಿದ್ದರೂ ಅಂತರಂಗದಲ್ಲಿತನ್ನಆ ಪಟ್ಟದರಾಣಿಯಕೈಗೊಂಬೆಯಂತಾಗಿದ್ದನು. ಇದೆಲ್ಲವೂ ಅವನ ಕೈಕೆಳಗಿನ ಮುಸಲ್ಮಾನ ಅಧಿಕಾರಿಗಳಿಗೆ ಗೊತ್ತಿದ್ದ ಮಾತಾಗಿದ್ದಿತು.

ಬಾದಶಹನ ಈ ಸ್ತ್ರೈಣವೃತ್ತಿಯ ಲಾಭವನ್ನು ಆ ಅಧಿಕಾರಿಗಳು ಬೀರಬಲನನ್ನು ಅಧಿಕಾರದಿಂದ ತಳ್ಳುವ ಕಾರ್ಯಕ್ಕಾಗಿ ಉಪಯೋಗಿಸಿಕೊಳ್ಳಲನುವಾದರು. ಪಟ್ಟದ ರಾಣಿಯ ಬಂಧು ಅರ್ಥಾತ್ ರಾಜಶಾಲಕ ಹಮೀದಸಾಹೇಬನು ರಾಣಿಯ ಸಂಬಂಧಿಕನೆಂದು ಅಲ್ಲಿಗೆ ಬಂದು ಅರಮನೆಯಲ್ಲಿ ವಾಸವಾಗಿದ್ದನು. ಅಕಬರನೇ ಅವನಿಗೆ ಮೌಲ್ವಿ ಪಂಡಿತರಿಂದ ತಕ್ಕಮಟ್ಟಿಗೆ ಶಿಕ್ಷಣಕೊಡಿಸಿ ಅವನನ್ನುಒಳ್ಳೇರೂಪಕ್ಕೆತಂದಿದ್ದನು. ಆದರೂ ರಾಜಕಾರಣದಲ್ಲಿ ಸೇರ್ಪಡೆಯಾಗಿ ಕೆಲಸ ಮಾಡುವಂಥ ಚಾಣಾಕ್ಷತನವೂ ಜಾಣತನವೂ ಅವನಲ್ಲಿರಲಿಲ್ಲವೆಂದರಿತು ಬಾದಶಹನು ಅವನನ್ನು ದರಬಾರಿನ ಯಾವದೇ ಕೆಲಸಕ್ಕೆ ನಿಯಮಿಸಿರಲಿಲ್ಲ.

ಬೀರಬಲನ ವಿರೋಧಿ ಅಧಿಕಾರಿಗಳೆಲ್ಲ ಆ ರಾಜಶಾಲಕಹಮೀದಸಾಹೇಬನನ್ನು ಕೂಡಿಕೊಂಡು ಬಾದಶಹನ ಪಟ್ಟದರಾಣಿಯ ಸಂದರ್ಶನಕ್ಕೆ ಹೋದರು. ಬೀರಬಲನನ್ನು ಮಂತ್ರಿತ್ವದಿಂದ ದೂರ ಮಾಡುವ ಉದ್ದೇಶವೆಂದೇ ಹೇಳಬೇಕಾಗಿಲ್ಲ. ಅವರೆಲ್ಲ ರಾಣಿಯನ್ನು ಕುರಿತು— "ಮಹಾರಾಜ್ಞಿಯವರೆ! ಮಹಾರಾಜರು ದರಬಾರಿನಲ್ಲಿಯ ಒಂದು ಪ್ರಧಾನ ಪಟ್ಟಕ್ಕೆ ಬೀರಬಲನೆಂಬ ಹಿಂದುವನ್ನು ನಿಯಮಿಸಿಕೊಂಡುದು ಸರ್ವಶ್ರುತವಿದೆ. ಆ ಕೆಲಸವನ್ನು ತೂಗಿಸಲು ತಮ್ಮ ಬಂಧು ಹಮೀದಸಾಹೇಬರು ಸಮರ್ಥರಿದ್ದರೂ ಅದಾವ ಕಾರಣದಿಂದಲೋ ಬಾದಶಹರು ಬೀರಬಲನನ್ನೇ ನಿಯಮಿಸಿದರು. ತಾವು ಮಹಾರಾಜರ ಮನವೊಲಿಸಿ ಬೀರಬಲನ ಕೆಲಸಕ್ಕೆ ಹಮೀದಸಾಹೇಬರನ್ನು ನಿಯಮಿಸುವಂತೆ ವ್ಯವಸ್ಥೆ ಮಾಡಿಸಬೇಕು" ಎಂದು ಹೇಳಿ ತಿರುಗಿದರು.

ಮಹಾರಾಣಿಗಾದರೂ ಆ ಅಧಿಕಾರಿ ಜನರು ಹೇಳಿದ ಯೋಜನೆಯು ಸರಿಯೆನಿಸಿ ತನ್ನ ತಮ್ಮನಿಗೆ ಅದರಂತೆ ಆಶ್ವಾಸನ ನೀಡಿ ಕಳಿಸಿದಳು. ಹಾಗು ಬಾದಶಹನು ಅಂತಃಪುರಕ್ಕೆ ಬರುವ ಸಮಯ ಕಾಯುತ್ತ ಕುಳಿತಳು.

ದಿನದಂತೆ ಬಾದಶಹನು ದರಬಾರವನ್ನು ಮುಕ್ತಾಯಗೊಳಿಸಿ ರಾಣೀ ವಾಸಕ್ಕೆ ಬಂದು ಸೇರಿದನು. ರಾಣಿಯು ಎಂದಿಲ್ಲದ ಉಪಚಾರದಿಂದ ಆತ ನನ್ನು ಸತ್ಕರಿಸಿದಳು. ಭೋಜನಕಾರ್ಯವೂ ಮುಗಿಯಿತು. ತಾಂಬೂಲ ವನ್ನು ಅಗಿಯುತ್ತ ಬಾದಶಹನು ಪ್ರಸನ್ನಚಿತ್ತನಾಗಿ ಕುಳಿತಿರುವ ಸಮಯ ವನ್ನು ನಿರೀಕ್ಷಿಸಿ ರಾಣಿಯು-"ಪ್ರಿಯರೆ! ಬೀರಬಲಮಂತ್ರಿಯನ್ನು ತೆಗೆದು ಆ ಮಂತ್ರಿಪದವನ್ನು ನಮ್ಮ ಹಮೀದಸಾಹೇಬನಿಗೇಕೆ ಕೊಡಬಾರದು?" ಎಂದು ನುಡಿದಳು.

ಬಾದಶಹನು ರಾಣಿಯ ಅಂತರ್ಗತ ಅಭಿಪ್ರಾಯವನ್ನರಿತು 'ಇದು ಕೇವಲ ಇವಳ ತಂತ್ರವಾಗಿರದೆ ಇದರ ಹಿನ್ನೆಲೆಯಲ್ಲಿ ದರಬಾರಿನ ಕೆಲವರ ಕೈವಾಡವಿರಬಹುದು. ಇದನ್ನು ಪರ್ಯಾಯದಿಂದಲೇ ನಿವಾರಿಸತಕ್ಕದ್ದೆಂದು' ವಿಚಾರಿಸಿ-'ಮಹಾರಾಜ್ಞಿಯವರೆ! ನಿಮ್ಮ ವಿಚಾರದಂತೆ ಮಾಡಲಡ್ಡಿಯಿಲ್ಲ. ಆದರೆ ನಿಮ್ಮ ತಮ್ಮನು ಅಷ್ಟೊಂದು ಶ್ರಮದ ಕೆಲಸ ವಹಿಸಲು ಯೋಗ್ಯ ನಾಗುವನೋ ಇಲ್ಲೋ ಎಂಬ ಸಂಶಯವೆನಗಿದೆ. ಮುಂದೇನು ಮಾಡ ತಕ್ಕದ್ದು?" ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡು ದೀರ್ಘವಿಚಾರದಲ್ಲಿ ಇದ್ದಂತೆ ಕುಳಿತುಬಿಟ್ಟನು.

ರಾಣಿಯು ತನ್ನ ಕೆಲಸವಾಗುವದೆಂಬ ಭರವಸೆಯನ್ನು ತಾಳಿ ಅದೇ ಉಬ್ಬಿನಲ್ಲಿ-'ಪ್ರಭುಗಳೆ! ಮೊದಲು ನೇಮಿಸಿ ನೋಡಿ ಅನುಭವ ಪಡೆಯಿರಿ. ಶ್ರಮವಹಿಸುವದು ಆತನಿಗೆ ಅಸಾಧ್ಯವಾದರೆ ಅವನ ದುರದೃಷ್ಟ. ನಾವೇನು ಮಾಡುವದು?' ಎಂದು ನುಡಿದಳು.

ರಾಣಿಯು ಏನೇ ಆದರೂ ಯೋಗ್ಯಮಾರ್ಗದಿಂದ ಬೇಡಿಕೆ ಮಾಡಿ ಕೊಂಡುದಕ್ಕೆ ಬಾದಶಹನು ಸಂತುಷ್ಟನಾಗಿ 'ರಾಣಿಯವರೆ! ನಿಮ್ಮ ಇಷ್ಟ ದಂತೆ ನಾಳೆಯೇ ಹಮೀದನಿಗೆ ಬೀರಬಲನ ಸ್ಥಾನ ಕೊಡುವೆ' ಎಂದು ಆಶ್ವಾಸನವಿತ್ತನು.

ಮರುದಿನ ಬೆಳಗಾಯಿತು. ದಿನದಂತೆ ಪಂಡಿತರೆಲ್ಲರೂ ಬಂದು ಆಸ್ಥಾನವನ್ನು ಪ್ರವೇಶ ಮಾಡಿದರು. ಬೀರಬಲನೂ ಬಂದು ಬಾದಶಹನನ್ನು ನಮಸ್ಕರಿಸಿದನು. ಕೂಡಲೇ ಬಾದಶಹನು-'ಬೀರಬಲ! ಇಂದಿನಿಂದ ನಿಮ್ಮನ್ನು ದರಬಾರಿನಿಂದ ದೂರೀಕರಿಸಿದೆ' ಎಂದು ಆಜ್ಞೆಯಿತ್ತನು. ಬೀರ

ಬಲನು ರಾಜಾಜ್ಞೆಯನ್ನು ಶಿರಸಾವಹಿಸಿ–'ಪ್ರಭುವಿನ ಇಷ್ಟ!' ಎಂದು ಇನ್ನೊಂದು ವಂದನೆ ಮಾಡಿ ಅಲ್ಲಿಂದ ಮನೆಗೆ ತೆರಳಿದನು. ಬಾದಶಹನು ಇನ್ನೊಂದು ಆಜ್ಞೆಯಿಂದ ಹಮೀದಸಾಹೇಬನನ್ನು ಕರೆಯಿಸಿ ಬೀರಬಲನು ವಹಿಸಿದ್ದ ಮಂತ್ರಿಪದವನ್ನಿತ್ತನು. ಹಮೀದಸಾಹೇಬನಿಗೂ ದರಬಾರಿನ ಅವನ ಜೊತೆಯ ಅಧಿಕಾರಿಗಳಿಗೂ ಅತೀವ ಸಂತೋಷ!

ಈ ಮಾತಿಗೆ ನಾಲ್ಕಾರು ದಿನಗಳುರುಳಿದವು. ಕೋಶಾಧ್ಯಕ್ಷನು ಬಂದು ಬಾದಶಹನಿಗೆ ಮುಜುರೆ ಮಾಡಿ–ಜೀಯ! ಬೊಕ್ಕಸವು ಬರಿದಾಗಿದೆ. ದರಬಾರಿನ ನಿತ್ಯದ ವೆಚ್ಚಕ್ಕೂ ಕೂಡ ಹಣವಿಲ್ಲದಾಗಿದೆ ನಾಳಿನ ದಿನವೇ ಸೈನಿಕರು ಮೊದಲಾಗಿ ಎಲ್ಲರಿಗೂ ಸಂಬಳ ಸಲ್ಲಿಸಬೇಕಾಗಿದೆ' ಎಂದು ಬಿನ್ನವಿಸಿದನು.

ಯಾವಾಗಲೂ ಇಂಥ ಹಣದ ಕೊರತೆಯ ಸಂದರ್ಭದಲ್ಲಿ ಬಾದಶಹನು ಬೀರಬಲನೊಡನೆ ಆಪ್ತಾಲೋಚನೆ ಮಾಡಿ ಸಮಯಮಾಡಿಗುವ ಪರಿಪಾಠ ವಿದ್ದಿತು. ಇಂದು ಕೋಶಾಧ್ಯಕ್ಷನು ತಿಳಿಸಿ ಹೋದನಂತರ ಬಾದಶಹನು ಮಂತ್ರಿ ಹಮೀದಸಾಹೇಬನನ್ನು ಕರೆದು–'ಹಮೀದ ಮಂತ್ರಿಗಳೇ! ಹಣಕ್ಕಾಗಿ ಮುಂದೇನು ವ್ಯವಸ್ಥೆ?' ಎಂದು ಕೇಳಿದನು. ಹಮೀದಸಾಹೇಬನು- 'ಜೀಯ! ನಾನು ಹೊಸಬನು' ಎಂದು ನುಡಿದು ಪಾರಾಗಿ ಹೋಗುವಷ್ಟರಲ್ಲಿಯೇ ಬಾದಶಹನು ಅವನ ಕೈಗೆ ಒಂದು ಮೊಳಗಟ್ಟಿಗೆಯನ್ನು ಕೊಟ್ಟು–'ಮಂತ್ರಿ ಸಾಹೇಬರೆ! ಈ ಕಟ್ಟಿಗೆಯನ್ನು ಉಪಯೋಗಿಸಿ ಕೇವಲ ನಾಲ್ವತ್ತುಸಾವಿರ ರೂಪಾಯಿಗಳನ್ನು ನಾಳಿನ ಸಂಜೆಯೊಳಗಾಗಿ ತಕ್ಕೊಂಡು ಬಂದುಬಿಡಿರಿ" ಎಂದು ಹೇಳಿ ಹೋಗಲು ಅಪ್ಪಣೆನೀಡಿದನು.

ರಾಜಾಜ್ಞೆಯಂತೆ ಹಮೀದಸಾಹೇಬನು ಮೊಳಗಟ್ಟಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ದರಬಾರಿನಿಂದ ಹೊರ ಬಿದ್ದು ಬಂದನು. ಮಾರ್ಗದಲ್ಲಿ ನಿಂತು ನಿಂತು– 'ಈ ಕಟ್ಟಿಗೆಯಿಂದ ಹಣ! ದೊರಕಿಸುವದೆಂತು? ಇದೇನು ಯಕ್ಷಿಣಿಯ ಶಾಸ್ತ್ರವೋ! ಅಕ್ಕನವರಿಂದ ಇಸಿದು ತಂದು ಕೊಡಬೇಕೆಂದರೆ ಇಷ್ಟು ದೊಡ್ಡ ರಕಮು ದೊರೆಯುವದು ಸಾಧ್ಯವೇ? ಇತ್ಯಾದಿ ಹಲವು ವಿಚಾರಗಳ ಮಾಲಿಕೆಯಲ್ಲಿಸಿಕ್ಕುಗತಿಗಾಣದಾದನು. ಕೊನೆಗೆ ಆತನು ಹಾಗೇ ಸಾಗಿ ತನ್ನ ಅಕ್ಕರಾಣಿಯವರಿಗೆ ಭೆಟ್ಟಿಯಾಗಿ ಎಲ್ಲ ಸಂಗತಿಯನ್ನು ನಿವೇದಿಸಿದನು.

ತಮ್ಮನ ಮುಖದಿಂದ ಎಲ್ಲ ಸಂಗತಿಯನ್ನು ಕೇಳಿ ರಾಣಿಯು ಒಮ್ಮೆಲೇ ತನ್ನ ಗಂಡನ ಈ ಬಗೆಗೆ ಕೋಪಾವಿಷ್ಟಳಾದಳು. ಹಾಗು ದರಬಾರಿನಿಂದ ಬಂದ ಕೂಡಲೆ ಆತನ ಸಮಾಚಾರ ತೆಗೆದುಕೊಳ್ಳುವ ಸಮಯ ಕಾಯುತ್ತ ಕುಳಿತಳು.

ಬಾದಶಹನು ಬಂದನು. ರಾಣೀವಾಸವನ್ನು ಸೇರಿದನು. ರಾಣಿಯು ಒಮ್ಮೆಲೆ ಹಸಿದ ಹುಲಿಯಂತೆ ಆತನ ಮೇಲೇರಿ ಹೋಗಿ- ಇದೇನು ಈ ಕಟ್ಟಿಗೆ? ಇದರಿಂದ ನಿಮಗೆ ನಾಲ್ವತ್ತು ಸಾವಿರ ರೂಪಾಯಿಗಳು ಬೇಕೆ? ಕೇವಲ ನನ್ನ ತಮ್ಮನ ಮರ್ಯಾದೆಗೆ ಕುಂದು ತರುವ ಕುರಿತು ಈ ಪ್ರಕಾರದ ಆಜ್ಞೆಯೇ?' ಎಂದು ಬಲವಾಗಿ ವಿರೋಧಿಸಿ ನುಡಿದು ಕಡೆಗೆ ಆಕೆ- 'ನಿಮ್ಮ ಬೀರಬಲನಿಂದ ಸಹ ಇದು ಸಾಧ್ಯವೇ?' ಎಂದು ಗರ್ಜಿಸಿದಳು, ಹಾಗು ಆಕೆ- 'ನೀವು ಬೀರಬಲನಿಂದ ಈ ನಾಲ್ವತ್ತು ಸಾವಿರ ರೂಪಾಯಿಗಳನ್ನು ತರಿಸಿದ್ದಾದರೆ ಮಾತ್ರ ನಮ್ಮ ಹಮೀದನ ಬದಲು ಆತನನ್ನು ಪುನಃ ನೇಮಿಸಿಕೊಂಡರೆ ಇನ್ನು ನಾನೆಂದೂ ನಮ್ಮ ತಮ್ಮನಿಗೆ ಮಂತ್ರಿ ಪದ ಕೊಡಿರೆಂದು ಬೇಡಿಕೊಳ್ಳುವದಿಲ್ಲ. ತಕ್ಕೊಳ್ಳಿರಿ ಈ ನಿಮ್ಮ ಕಟ್ಟಿಗೆಯನ್ನು. ಅದನ್ನು ಬೀರಬಲನಿಗೆ ಕಳಿಸಿ ೪೦ ಸಾವಿರ ರೂಪಾಯಿಗಳನ್ನು ತರಿಸಿರಿ' ಎಂದು ಸಿಟ್ಟಿನಿಂದ ಆ ಕಟ್ಟಿಗೆಯನ್ನು ಬಾದಶಹನ ಮುಂದೆ ಚೆಲ್ಲಿದಳು.

ಬಾದಶಹನು ರಾಣಿಯ ಬಿರುನುಡಿಗಳನ್ನು ಕೇಳಿ ನಸು ನಕ್ಕು ಆಗಲೇ ಬೀರಬಲನನ್ನು ಕರೆಯಿಸಿದನು. ಬೀರಬಲನು ಬಂದು ರಾಜ-ರಾಣಿಯರಿಗೆ ಮುಜುರೆ ಮಾಡಿ ನಿಲ್ಲಲು ಬಾದಶಹನು– "ಬೀರಬಲ! ಈ ಕಟ್ಟಿಗೆಯನ್ನು ತಕ್ಕೊಳ್ಳಿರಿ. ಇದನ್ನು ಉಪಯೋಗಿಸಿ ನಾಳಿನ ಸಂಜೆಯೊಳಗಾಗಿ ನಾಲ್ವತ್ತು ಸಾವಿರ ರೂಪಾಯಿಗಳನ್ನು ತಂದು ಒಪ್ಪಿಸಿರಿ" ಎಂದು ಹೇಳಿದನು. ಕೂಡಲೆ ಬೀರಬಲನು 'ತಥಾಸ್ತು' ಎಂದು ಆ ಕಟ್ಟಿಗೆ ಸಹಿತ ಅಲ್ಲಿಂದ ಹೊರಟು ಮನೆಗೆ ಬಂದನು.

ಮರು ದಿನ ಬೆಳಗಿನಲ್ಲಿ ನೂರಾರು ಆಳುಗಳನ್ನು ಗುದ್ದಲಿ–ಸಲಿಕೆ ಮುಂತಾದ ಸಲಕರಣೆಗಳೊಂದಿಗೆ ದಿಲ್ಲಿಯಲ್ಲಿಯ ಶ್ರೀಮಂತ ವ್ಯಾಪಾರಸ್ಥರ ಮನೆಗಳಿದ್ದ ಓಣಿಗೆ ನಡೆದನು. ಅಲ್ಲಿ ಹೋದ ಕೂಡಲೆ ತನ್ನ ಕೈಯಲ್ಲಿದ್ದ ಮೊಳಗಟ್ಟಿಗೆಯಿಂದ ಮಾರ್ಗದ ಅಳತೆಯನ್ನು ಮಾಡತೊಡಗಿದನು. ಹಾಗು

ಅಲ್ಲಿಯ ಶ್ರೀಮಂತರಿಗೆಲ್ಲ- 'ಎರಡೂ ಬದಿಯ ಮನೆಗಳನ್ನು ಕೆಡವಿ ವಿಸ್ತರಿಸಬೇಕೆಂದು ರಾಜಾಜ್ಞೆಯಾಗಿದೆ' ಎಂದು ಹೇಳಿದನು. ಅದರಿಂದ ಎಲ್ಲ ಸಿರಿವಂತರು ತಳಮಳಗೊಂಡರು. ಹಾಗು ಬೀರಬಲನನ್ನು ಗುಪ್ತವಾಗಿ ಕಂಡು, 'ನಮ್ಮ ಮನೆಗಳನ್ನು ಕೆಡವದೆ ಉಳಿಸಿದರೆ ಈ ಓಣಿಯವರೆಲ್ಲ ಕೂಡಿ ಐವತ್ತು ಸಾವಿರ ರೂಪಾಯಿ ನಿಮಗೆ ಸಲ್ಲಿಸುವೆವು. ಅವನ್ನು ನೀವು ತೆಗೆದುಕೊಂಡು ಹೋಗಿ ಬಾದಶಹರನ್ನು ಈ ವಿಚಾರದಿಂದ ಪರಾವೃತ್ತ ಗೊಳಿಸಿರಿ' ಎಂದು ಹೇಳಿ ಆಗಲೇ ೫೦ ಸಾವಿರ ರೂಪಾಯಿಗಳನ್ನು ತಂದು ಬೀರಬಲನಿಗೆ ಒಪ್ಪಿಸಿದರು.

ಬೀರಬಲನು ತಾನು ಕೈಕೊಂಡ ಕೆಲಸವನ್ನು ರಹಿತಪಡಿಸಿ ಅಲ್ಲಿಂದ ತಿರುಗಿದನು. ನಾಲ್ವತ್ತು ಸಾವಿರಕ್ಕೆ ಮಿಕ್ಕಿ ಬಂದ ಹಣವನ್ನು ಆಳುಗಳಲ್ಲಿ ಹಂಚಿದನು. ಮತ್ತು ಸಂಜೆಯ ಹೊತ್ತಿಗೆ ಆ ನಾಲ್ವತ್ತು ಸಾವಿರ ರೂಪಾಯಿಗಳನ್ನು ರಾಜ-ರಾಣಿಯರು ಕುಳಿತಾಗ ಒಯ್ದು ಸುರುವಿದನು.

ಬಾದಶಹನು ಆ ರಾಣಿಗೆ ರೂಪಾಯಿಗಳ ರಾಶಿಯನ್ನು ತೋರಿಸಿ— 'ಎಣಿಸಿಕೊಳ್ಳಿರಿ' ಎಂದು ಕುಲುಕುಲು ನಗಹತ್ತಿದನು. ರಾಣಿಯು ದಂಗಾಗಿ ಬೀರಬಲನ ಮುಖವನ್ನು ಮಿಕಿಮಿಕಿ ನೋಡಹತ್ತಿದಳು. ಅಲ್ಲಿಯೇ ಸಮೀಪದಲ್ಲಿ ನಿಂತಿದ್ದ ಹಮೀದ ಸಾಹೇಬನು ಮುಖಭಂಗಿತನಾಗಿ ಮರೆಗೆ ಸರಿದನು.

ಕಡೆಗೆ ಬೀರಬಲನು ರಾಜ - ರಾಣಿಯರಿಗೆ ಮುಜುರೆ ಮಾಡಿ ಮನೆಗೆ ಹೊರಟನು. ಬಾದಶಹನು ಆತನಿಗೆ— "ಬೀರಬಲರೆ! ನಾಳೆಯಿಂದ ನೀವು ನಿಮ್ಮ ಮಂತ್ರಿ ಸ್ಥಾನವನ್ನು ಅಲಂಕರಿಸಿರಿ" ಎಂದು ಹೇಳಿ ಮರ್ಯಾದಿಸಿ ಕಳಿಸಿದನು.

## — ಬೀರಬಲನ ಅಜ್ಞಾತವಾಸ —

ಬಾದಶಹನ ದರಬಾರಿನ ಅಧಿಕಾರಿಗಳ ಗುಪ್ತ ಕಾರಸ್ಥಾನದಿಂದ ಈ ಮೊದಲು ಬೀರಬಲನನ್ನು ಮಂತ್ರಿತ್ವದಿಂದ ಚ್ಯುತಗೊಳಿಸಿ ರಾಜಶಾಲಕ ಹಮೀದಸಾಹೇಬನನ್ನು ಆ ಸ್ಥಾನಕ್ಕೆ ನೇಮಿಸುವಂತೆ ವ್ಯವಸ್ಥೆಯಾಗಿದ್ದಿತು. ಅದರಂತೆ ಅವನು ಮಂತ್ರಿಯೂ ಆದನು. ಒಂದು ವಾರದೊಳಗೇ ಪದಭ್ರಷ್ಟನಾದನು ಬಾದಶಹನಿಂದ ಪುನಃ ಬೀರಬಲನ ನೇಮಕವೂ ಆಯಿತು. ಈ

ಸಂಗತಿಗಳು ಹಿಂದೆ ಬಂದಿವೆ. ಇವೆಲ್ಲ ಘಟನೆಗಳಿಗೆ ಮೂಲವೆಂದರೆ ಹಿಂದೂ ಯವನರ ವೈಷಮ್ಯ. ಯಾವನೀಯ ರಾಜ್ಯದಲ್ಲಿ ಹಿಂದುಗಳ ಆಧ್ಯತೆ ಏಕೆ? ಎಂಬ ಕುರು ಕುರು ಯವನರದು. ಬಾದಶಹನೇ ಪರಧರ್ಮ ಸಹಿಷ್ಣುತೆ ಯುಳ್ಳವನಿರುವನೆಂದಮೇಲೆ ಅವನ ಆಶ್ರಯವನ್ನು ಬಯಸುವದರಲ್ಲಿ ತಪ್ಪೇನು? ಎಂದು ಹಿಂದುಗಳ ವಿಚಾರ. ಹೀಗಾಗಿ ಈ ಎರಡೂ ಧರ್ಮ ದವರ ವೃತ್ತಿನೀತಿಗಳಲ್ಲಿ ತಾಳಮೇಳ ಬೀಳದಂತಾಗಿದ್ದಿತು. ಇದು ಬಾದ ಶಹನಿಗೂ ತಿಳಿದ ಮಾತಾಗಿದ್ದಿತು. ಇದನ್ನು ಇಲ್ಲದಂತೆ ಮಾಡಿ ಈ ಎರಡೂ ಧರ್ಮಗಳ ಅಷ್ಟೇ ಏಕೆ ಎಲ್ಲ ಧರ್ಮಗಳ ಸಮನ್ವಯ ಮಾಡುವ ವಿಚಾರ ದಿಂದ ಆತನು ತನ್ನದೇ ಆದ 'ದೀನೇ ಇಲಾಹಿ' ಎಂಬ ಹೊಸಧರ್ಮಸ್ಥಾಪಿಸಿ ಪ್ರಚಾರಗೊಳಿಸುವ ಪ್ರಯತ್ನಮಾಡಿದನು. ಆದರೆ ಅವನ ಈ ಹೊಸ ಉಪಕ್ರಮವು ಫಲಕಾರಿಯಾಗದೆ ಎಂದಿನಂತೆ ಹಿಂದೂ ಯವನರ ದ್ವೇಷ ಮಾತ್ರ ಅಳಿಯದೆ ಉಳಿಯಿತು. ನಿರಂತರವಾಗಿ ನಾಶವಾಗದಿದ್ದರೂ ನಿದಾನ ಈ ದ್ವೇಷನಿವಾರಣೆಗೆ ಯತ್ನಿಸುತ್ತಿದ್ದ ಆ ಅಕಬರಬಾದಶಹನ ರಾಜ್ಯದಲ್ಲಿ ಅಥವಾ ಆಳಿಕೆಯ ಕಾಲದಲ್ಲಿ ಆ ದ್ವೇಷ ಇಲ್ಲದಾಗಬೇಕಾಗಿತ್ತು. ಆದರೆ ಹಾಗೆಂದಿಗೂ ಆಗಲಿಲ್ಲ.

ತನ್ನ ಬುದ್ಧಿಮಾಂದ್ಯತೆಯಿಂದ ಹಾಮಿೂದಸಾಹೇಬನು ಪದಚ್ಯುತ ನಾದದ್ದು ಬೀರಬಲನಿಗೆ ಹೆಚ್ಚು ತ್ರಾಸದಾಯಕವಾಗಹತ್ತಿತು. ಇದು ವರೆಗೆ ಮರೆಯಲ್ಲಿ ನಿಂತು ಬೀರಬಲನ ವಿರುದ್ಧ ಯತ್ನಿಸುತ್ತಿದ್ದ ಯವನ ಅಧಿ ಕಾರಿಗಳು ಈಗ ಪ್ರತ್ಯಕ್ಷವಾಗಿ ಎದುರುತೊಡಹತ್ತಿದರು.

ಬಾದಶಹನ ಇನ್ನೊಬ್ಬ ಬೀಗನು ತುರ್ಕೀ ದೇಶದ ಸುಲ್ತಾನನ ರಾಜ್ಯ ದಲ್ಲಿ ಕ್ವಾಯದೆ ಪಂಡಿತನಾಗಿ ಪ್ರಸಿದ್ಧಿಯನ್ನು ಪಡೆದಿದ್ದನು. ದಿಲ್ಲಿಯ ಅಧಿ ಕಾರಿಗಳೆಲ್ಲ ಆತನನ್ನು ಇಲ್ಲಿಗೆ ಬರಮಾಡಿಕೊಂಡು ಅವನಿಗೇ ಬೀರಬಲನ ಮಂತ್ರಿಪದವನ್ನು ಕಸಿದುಕೊಡಿಸಬೇಕು. ಹಾಗು ಬೀರಬಲನನ್ನು ದಿಲ್ಲಿ ಯಿಂದ ಹೊರತಳ್ಳಬೇಕು ಎಂಬ ವಿಚಾರಮಾಡಿದರು. ಅದರಂತೆ ಅವರು ಬಾದಶಹನ ಬೀಗನನ್ನು ಕರೆಯಿಸಿಕೊಂಡು ಈ ಮೊದಲು ಹಾಮಿೂದ ಸಾಹೇಬನನ್ನು ನಿಯಮಿಸುವ ಕುರಿತು ಅನುಸರಿಸಿದ ಮಾರ್ಗದಂತೆ ಅಂದರೆ ಬಾದಶಹನ ಪಟ್ಟದ ರಾಣಿಯಮುಖಾಂತರ ಅವನನ್ನು ಬೀರಬಲನ ಮಂತ್ರಿ

ಪದಕ್ಕೆ ನೇಮಿಸುವಂತೆ ವ್ಯವಸ್ಥೆ ಮಾಡಿದರು. ಇಷ್ಟೇ ಅಲ್ಲ ಬೀರಬಲನನ್ನು ದಿಲ್ಲಿಯಿಂದ ಹೊರದೂಡುವಂತೆಯೂ ರಾಣಿಯಿಂದ ರಾಜನಿಗೆ ಹೇಳಿಸಿ ಆದರಂತೆ ಮಾಡಿದರು. ಬಾದಶಹನಾದರೂ ರಾಣಿಯ ವಚನಕ್ಕೆ ಪೂರ್ಣ ಸಿಕ್ಕುಬೀಳದೆ ' ಹವಿೂದನಂತೆ ಕೆಲಸಕ್ಕೆ ಅಯೋಗ್ಯನಾದಲ್ಲಿ ಈತನನ್ನೂ ಕೆಲಸದಿಂದ ತಳ್ಳುವ ಅಧಿಕಾರವನ್ನು ತನ್ನ ಕಡೆಗೆ ಮಾತ್ರ ಇಟ್ಟುಕೊಂಡನು.

ಮುಂದೆ ರಾಜಾಜ್ಞೆಯಿಂದ ಬೀರಬಲನು ದಿಲ್ಲಿಯಿಂದ ಹೊರಬಿದ್ದನು. ಮಹಾರಾಣಿಯ ೨ ನೇ ತಮ್ಮನು ಬೀರಬಲನ ಮಂತ್ರಿಪದ ಸ್ವೀಕರಿಸಿದನು.

ಬಾದಶಹನು ವಿದ್ಯಾಪಕ್ಷಪಾತಿಯು. ಇದು ವರೆಗೆ ಅವನು ಬೀರಬಲನಿಂದ ಅಂತರಿಸಿ ಇದ್ದಿರಲಿಲ್ಲ. ಅವನು ದರಬಾರಿಗೆ ಬಾರದಿದ್ದರೂ ಕೂಡ ನಿತ್ಯವೂ ಆತನನ್ನು ಕರೆಯಿಸಿಕೊಂಡು ರಾಜರಸಿಕತೆಯಲ್ಲಿ ಕಾಲ ಕಳೆಯುತ್ತಿದ್ದನು. ಈಗ ತನ್ನದೇ ಆದ ರಾಜಾಜ್ಞೆಯಿಂದ ಆ ಬೀರಬಲನು ದಿಲ್ಲಿಯನ್ನು ತ್ಯಾಗ ಮಾಡಿ ಹೋದುದರಿಂದ ಬಾದಶಹನಿಗೆ ಎಷ್ಟೊಂದೂ ಸೊಗಸು ಇಲ್ಲದಾಯಿತು. ದರಬಾರಿನಲ್ಲಿ ಕುಳಿತಾಗ ಒಮ್ಮೊಮ್ಮೆ ವಿಸ್ಮೃತಿಯಿಂದ 'ಬೀರಬಲ!' ಎಂದು ಇತರರಿಗೆ ಸಂಬೋಧಿಸಿದ್ದುದೂ ಉಂಟು. ಹೀಗೆ ಬೀರಬಲನಿಂದ ತನ್ಮಯನಾದ ಬಾದಶಹನ ರಾಜ್ಯಕಾರ್ಯವು ನಾಲ್ಕಾರು ತಿಂಗಳು ಯಥಾ-ತಥಾ ನಡೆಯಿತು. ಯಾವದಕ್ಕೂ ಅಷ್ಟೊಂದು ಲಕ್ಷ್ಯಕೊಡದಾದನು. ಕಡೆಗೆ ಅವನು "ಬೀರಬಲನಿಲ್ಲದೆ ತನಗೆ ಸೊಗಸುಇಲ್ಲ. ಅವನು ಇದ್ದಲ್ಲಿಂದ ಅವನನ್ನು ಬರಮಾಡಿಕೊಳ್ಳಬೇಕು" ಎಂಬ ವಿಚಾರದಿಂದ ತನ್ನ ನಂಬಿಗೆಯ ಸ್ವಾರರಿಂದ ದಿಲ್ಲಿಯ ಸುತ್ತಲಿನ ಹಳ್ಳಿ ಪಳ್ಳಿಗಳಲ್ಲೆಲ್ಲ ಶೋಧಿಸಿ ನಿರಾಶೆಯುಳ್ಳವನಾದನು. ಇಂತು ನಿರಾಶೆಯ ಸ್ಥಿತಿಯಲ್ಲಿಯೇ ಕೆಲ ದಿನ ಕಳೆದ ನಂತರ ಅವನಿಗೊಂದು ಯುಕ್ತಿ ಹೊಳೆಯಿತು.

ಒಂದಾನೊಂದು ದಿನ ದರಬಾರಿನಲ್ಲಿ ಕುಳಿತಾಗ ಬಾದಶಹನು ಬೀರಬಲನ ಸ್ಥಾನದಲ್ಲಿದ್ದ ತನ್ನ ಬೀಗನನ್ನು ಕರೆದು- 'ಮಂತ್ರಿಸಾಹೇಬ! ಈ ದಿಲ್ಲೀ ಪಟ್ಟಣದಲ್ಲಿ ನದಿಯ ಹೊರತು ಸಿಹಿ ನೀರಿನ ಜಲಾಶಯಗಳಿಲ್ಲ. ಆದಕ್ಕಾಗಿ ನಮ್ಮ ರಾಜ್ಯದಲ್ಲಿಯ ಪ್ರತಿಯೊಂದು ಹಳ್ಳಿಯಿಂದ ಒಂದೊಂದು ಸಿಹಿ ನೀರಿನ ಬಾವಿಯನ್ನು ತರಿಸಿ ಈ ಪಟ್ಟಣದ ತುಂಬ ಇಟ್ಟು ಬಿಡಬೇಕಾಗಿದೆ. ಅದರಂತೆ ಪ್ರತಿಯೊಂದು ಹಳ್ಳಿಗೆ ಈ ರಾಜಾಜ್ಞೆಯನ್ನು ಕಳಿಸಿ ಒಂದು ವಾರದಲ್ಲಿ ಎಲ್ಲ

ಸಿಹಿ ನೀರಿನ ಬಾವಿಗಳನ್ನು ತರಿಸತಕ್ಕದ್ದು. ಒಂದು ವೇಳೆ ನೀವು ಇಂಥ ಬಾವಿಗಳನ್ನು ತರಿಸದಿದ್ದರೆ ಹಾಗು ಎಲ್ಲ ಗ್ರಾಮಸ್ಥರು ಒಂದೊಂದು ಬಾವಿಯನ್ನು ಕಳಿಸದಿದ್ದರೆ ಯೋಗ್ಯಶಾಸನ ಮಾಡಲ್ಪಡುವದು"ಎಂದು ಹೇಳಿದನು.

ಮಂತ್ರಿಯು ರಾಜಾಜ್ಞೆಯಂತೆ ಎಲ್ಲ ಊರುಗಳಿಗೆ ಒಟ್ಟೆ ಹುಕುಮು ಕಳಿಸಿದನು. ಮತ್ತು ತಾನು ತರಿಸಿ ಇಡದಿದ್ದರೆ ಶಿಕ್ಷೆಗೆ ಗುರಿಯಾಗುವೆನೆಂಬ ಭಯದಿಂದ ಆ ದಿನವೇ ತನ್ನ ಮಂತ್ರಿತ್ವವನ್ನು ಬಿಟ್ಟು ತನ್ನ ತುರ್ಕೀ ದೇಶಕ್ಕೆ ಹೋಗಿಬಿಟ್ಟನು.

ದಿಲ್ಲಿಯ ರಾಜ್ಯದಲ್ಲಿ ಎಲ್ಲ ಗ್ರಾಮಸ್ಥರುಗಳಿಗೆ ರಾಜಾಜ್ಞೆ ಮುಟ್ಟಿತು. ಅದರಲ್ಲಿ ಎಷ್ಟೋ ಗ್ರಾಮಸ್ಥರು 'ನಮ್ಮ ಊರಲ್ಲಿ ಸಿಹಿ ನೀರಿನ ಬಾವಿಗಳಿಲ್ಲ' ಎಂದು ಬರೆದು ಕಳಿಸಿದರು. ಕೆಲವರು 'ನಮ್ಮ ಊರಿಗೆ ಒಂದೇ ಬಾವಿಯಿದೆ' ಎಂದು ಬರೆದರು. ಬೇರೆ ಕೆಲವರು 'ನಮ್ಮಲ್ಲಿ ಯಾವ ತರದ ಬಾವಿಗಳಿಲ್ಲ; ಪರವೂರಿಂದ ನೀರು ತಂದು ಕುಡಿಯುತ್ತೇವೆ' ಎಂದು ಬರೆದರು.

ಈ ಪ್ರಕಾರವಾಗಿ ಬಂದ ಗ್ರಾಮಸ್ಥರ ಉತ್ತರಗಳನ್ನು ಬಾದಶಹನು ಸ್ವತಃ ಪರಿಶೀಲನ ಮಾಡಿ ಫೈಲಿಗೆ ಚೆಲ್ಲಿದನು. ಕೊನೆ ಕೊನೆಗೆ ಉಳಿದ ಒಂದು ಊರಿನ ರಿಪೋರ್ಟು ಬಂದಿತು. ಆ ಊರಿನ ಗ್ರಾಮಸ್ಥರು-"ಮಹಾಪ್ರಭೋ! ನಮ್ಮ ಊರಲ್ಲಿರುವ ಸಿಹಿ ನೀರಿನ ಬಾವಿಯನ್ನು ಹುಜೂರರಿಗೆ ರವಾನಿಸಲು ಸಿದ್ಧರಿರುವೆವು. ತಮ್ಮ ದರಬಾರಿನ ಎದುರಿನಲ್ಲಿದ್ದ ಸೌಳ ಬಾವಿಯನ್ನು ಇಲ್ಲಿಗೆ ಕಳಿಸಿಕೊಡುವದಾಗಬೇಕು. ಅಂದರೆ ಆ ಸೌಳ ಬಾವಿಗೆ ಇಲ್ಲಿಯ ಸಿಹಿ ನೀರಿನ ಬಾವಿಯನ್ನು ತಳಕುಹಾಕಿ ಕಳಿಸಿಕೊಡುತ್ತೇವೆ. ಅಂದರೆ ನಮ್ಮ ಸಿಹಿ ನೀರಿನ ಬಾವಿಯು ತಮಗೆ ಮುಟ್ಟುತ್ತದೆ. ಅದನ್ನು ಒಂದನ್ನೇ ಕಳಿಸಬೇಕೆಂದರೆ ಅದರ ಒಪ್ಪಿಗೆಯಿಲ್ಲ. ಜೊತೆಗೆ ಇನ್ನೊಂದು ಬಾವಿಯನ್ನು ಅಪೇಕ್ಷೆ ಮಾಡುತ್ತದೆ. ಈ ಎಲ್ಲ ವಿವರವು ಪ್ರಭುಗಳ ಚಿತ್ತಕ್ಕೆ ಅರಿಕೆ ಇರಬೇಕು" ಎಂಬದಾಗಿ ಬರೆದು ಕಳಿಸಿದ್ದರು. ಅದನ್ನು ಓದಿದ ಕೂಡಲೆ ಬಾದಶಹನು ಬಳ್ಳಿ ಹರ್ಷಿತನಾದನು. ನಿಜಕ್ಕೂ ಇದು ಆ ಗ್ರಾಮಸ್ಥರ ವಿಚಾರಕ್ಕೆ ಹೊಳೆದ ಸಂಗತಿಯಲ್ಲ. ಅದೇ ಊರಲ್ಲಿ ನನ್ನ ಮಿತ್ರನಿರಲಿಕ್ಕೇಬೇಕು. ಎಂದು ನಿರ್ಧರಿಸಿ ಆ ಕೂಡಲೆ ತನ್ನ ಪರಿವಾರದಿಂದ ಆ ಊರಿಗೆ ಹೊರಟನು. ಅಲ್ಲಿಗೆ ಹೋಗಿ ಗ್ರಾಮಸ್ಥರಿಂದ ಆ ರಿಪೋರ್ಟಿನ ಬರೆಹವನ್ನು ಹೇಳಿದ ಬೀರಬಲನ ಮನೆ

ಯನ್ನು ಕಂಡನು. ರಾಜ-ಮಂತ್ರಿಗಳಿಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಬಳಿಕ ಬಾದಶಹನು ರಾಜಸನ್ಮಾನದಿಂದ ಬೀರಬಲನನ್ನು ರಾಜಧಾನಿಗೆ ಕರೆತಂದನು. ಅವನಿಗೆ ಮತ್ತೆ ಅವನ ಮಂತ್ರಿ ಪದವನ್ನು ನೀಡಿದನು.

## - ವಿದೇಶಗಳಲ್ಲಿ ಬೀರಬಲನ ಚಾತುರ್ಯ ಪ್ರಶಂಸನೆ -

ದಿಲ್ಲಿಯ ಅಕಬರ ಬಾದಶಹನ ಸುವ್ಯವಸ್ಥಿತವಾದ ರಾಜ್ಯದಾಡಳಿತವನ್ನೂ ಅವನಲ್ಲಿಯ ಮಂತ್ರಿಮಂಡಲವನ್ನೂ ವಿದೇಶೀಯ ಪ್ರವಾಸಿಗಳು ಕಂಡು ಮನವಾರೆ ಹೊಗಳಿರುವರು. ಗ್ರೀಸ ಹಾಗು ತುರ್ಕೀ ದೇಶದ ರಾಜರುಗಳಿಂದ ದಿಲ್ಲಿಯ ದರಬಾರಿಗೆ ಸ್ನೇಹಯುಕ್ತವಾದ ಸಮಾಚಾರ ಪತ್ರಿಕೆಗಳ ಬಳಿಕೆಯಾಗಹತ್ತಿತು.

ಒಮ್ಮೆ ತುರ್ಕೀ ಸುಲ್ತಾನನು ಭಾರತವನ್ನು ಸುತ್ತಾಡಿ ಬಂದ ತನ್ನಲ್ಲಿಯ ಪ್ರವಾಸಿಗಳಿಂದ ಬೀರಬಲನ ಚತುರತೆಯ ವರ್ಣನೆಯನ್ನು ಕೇಳಿ ಒಳ್ಳೆ ಕೌತುಕಗೊಂಡನು. ಹಾಗು ಆತನು ಸ್ವತಃ ಬೀರಬಲನ ಜಾಣತನವನ್ನು ಪರೀಕ್ಷೆ ಮಾಡುವ ಉದ್ದೇಶದಿಂದ ದಿಲ್ಲಿಯ ಬಾದಶಹನ ಕಡೆಗೆ ಒಂದು ಬರಿಕೊಡವನ್ನು ಕಳಿಸಿದನು. ಮತ್ತು ಅದರ ಜೊತೆಗೆ ಒಂದು ಪತ್ರ ಬರೆದು— "ಸಾಮ್ರಾಟ್ ಅಕಬರ ಬಾದಶಹರೆ! ಈಗ ನಿಮ್ಮ ಕಡೆಗೆ ಒಂದು ಬರಿಕೊಡವನ್ನು ಕಳಿಸಿದೆ. ನಿಮ್ಮ ಚತುರ ಮಂತ್ರಿಗಳಲ್ಲಿ ಓತಪ್ರೋತವಾಗಿರುವ ಜಾಣತನವನ್ನು ಅದರಲ್ಲಿ ತುಂಬಿ ಕಳಿಸುವಿರೆಂದು ಆಶಿಸುವೆನು" ಎಂದು ಕೇಳಿಕೊಂಡಿದ್ದನು.

ತುರ್ಕೀ ರಾಜ ಸೇವಕರಿಂದ ಪತ್ರ ಸಹಿತ ಬರಿಕೊಡವು ದಿಲ್ಲಿಯ ದರಬಾರಿಗೆ ಬಂದು ತಲುಪಿತು. ಬಾದಶಹನು ತನ್ನ ಮಂತ್ರಿಗಳಿಗೆಲ್ಲ ತುರ್ಕಿ ಸುಲ್ತಾನನ ಸಂದೇಶವನ್ನು ತಿಳಿಸಿ ಆತನು ಕಳಿಸಿದ ಬರಿಕೊಡವನ್ನು ತೋರಿಸಿದನು. ಅದನ್ನು ಕಂಡು ಅವರೆಲ್ಲರು— "ಪ್ರಭೋ! ಇದು ಆ ಸುಲ್ತಾನನ ಹುಚ್ಚಾಟ! ಹಾಗು ಆತನು ಬುದ್ಧಿಪೂರ್ವಕವಾಗಿ ನಡೆಯಿಸಿದ ಚೇಷ್ಟೆ!" ಎಂದು ಆ ಸುಲ್ತಾನನನ್ನು ಹೀಯಾಳಿಸಿ ನುಡಿದರು. ಬಾದಶಹನು ತನ್ನ ಮಂತ್ರಿಗಳಾಡಿದ ನುಡಿಗಳನ್ನು ಕೇಳಿ— "ಇದರಲ್ಲೇನೋ ಗೂಢವಿದೆ,

ಬೀರಬಲನನ್ನು ಕೇಳಿ ಸುಲ್ತಾನನ ಪತ್ರಕ್ಕೆ ಉತ್ತರ ಬರೆಯೋಣ" ಎಂದು ನುಡಿದು ಆಗಲೇ ಸೇವಕನಿಂದ ಬೀರಬಲನನ್ನು ಕರೆಯಿಸಿದನು.

ಬೀರಬಲನು ಬಂದಕೂಡಲೆ ಬಾದಶಹನು ತುರ್ಕಿಸುಲ್ತಾನನ ಪತ್ರ ಹಾಗು ಕೊಡವನ್ನು ಆತನ ಕೈಗೆ ಒಪ್ಪಿಸಿದನು. ಹಾಗು ಇಂದೇ ಸುಲ್ತಾನನಿಗೆ ಈ ಬಗೆಗೆ ಬರೆದು ತಿಳಿಸಬೇಕಾಗಿದೆ. ಎಂದು ಹೇಳಿದನು.

ಕೂಡಲೆ ಬೀರಬಲನು–'ಪ್ರಭೊ! ಸುಲ್ತಾನನ ಬೇಡಿಕೆಯಂತೆ ಈ ಕೊಡದ ತುಂಬ ಜಾಣತನವು ಈಗಲೇ ಸಿಗಲಾರದು. ಇನ್ನು ಆರುತಿಂಗಳ ನಂತರ ದೊರೆಯುವದು. ಅದರಂತೆ ಬರೆದು ತಿಳಿಸಬೇಕು' ಎಂದು ಹೇಳಿದನು. ಬಾದಶಹನು–'ಬೀರಬಲ! ನೀನೇ ಇನ್ನು ಆರುತಿಂಗಳಿಗೆ ಈ ವ್ಯವಸ್ಥೆಮಾಡು' ಎಂದು ಆತನ ಕೈಗೆ ಆ ಬರಿಕೊಡವನ್ನು ಒಪ್ಪಿಸಿ ಅದರಂತೆ ಸುಲ್ತಾನನಿಗೆ ಉತ್ತರ ಬರೆದು ಕಳಿಸಿದನು.

ಈ ಮಾತಿಗೆ ಐದು ತಿಂಗಳುಗಳು ಗತಿಸಿದವು. ಬಾದಶಹನು ಬೀರಬಲನಿಗೆ ಎಚ್ಚರಿಕೆ ಕೊಟ್ಟನು. ಆಗ ಬೀರಬಲನು ಇನ್ನೂ ಸ್ವಲ್ಪ ಜಾಣತನ ಬೇಕಾಗಿದೆ. ಅದಷ್ಟು ದೊರೆತನಂತರ ಕೊಡವನ್ನು ತಂದು ಒಪ್ಪಿಸುವೆನು" ಎಂದು ಹೇಳಿದನು.

ಬೀರಬಲನು ಆ ಬರಿಕೊಡವನ್ನೊಯ್ದು ತನ್ನ ಹಿತ್ತಲದಲ್ಲಿ ಹಬ್ಬಿದ ಕುಂಬಳ ಬಳ್ಳಿಯಲ್ಲಿ ಇರಿಸಿದನು. ಹಾಗು ಅದರಲ್ಲಿ ಕುಂಬಳ ಹೀಚಿಯೊಂದನ್ನು ಸೇರಿಸಿ ನಿತ್ಯವೂ ಆ ಬಳ್ಳಿಗೆ ನೀರು ಉಣ್ಣಿಸುವ ವ್ಯವಸ್ಥೆ ಮಾಡಿದನು. ಈ ಅವಧಿಯಲ್ಲಿ ಆ ಹೀಚಿಯು ಬೆಳೆಯುತ್ತ ಬೆಳೆಯುತ್ತ ದೊಡ್ಡ ಕಾಯಿಯಾಗಿ ಕೊಡತುಂಬ ವ್ಯಾಪಿಸಿಬಿಟ್ಟಿತು!

ಮರುದಿನ ಆರುತಿಂಗಳು ತುಂಬುವದರಲ್ಲಿದ್ದಿತು. ಬೀರಬಲನು ದರಬಾರಿಗೆ ಬಂದು ಬಾದಶಹನನ್ನು ಕುರಿತು–" ಪ್ರಭು! ಸುಲ್ತಾನನ ಬೇಡಿಕೆಯಂತೆ ಕೊಡದ ತುಂಬಾ ಜಾಣತನವು ದೊರೆತಿದೆ. ಅದಷ್ಟು ತೀವ್ರ ಅದನ್ನು ಅವರಕಡೆಗೆ ಕಳಿಸಿರಿ. ದಿನಾವಧಿಯಾದರೆ ಜಾಣತನವೆಲ್ಲ ಕೆಟ್ಟು ಹೋಗುವ ಸಂಭವವಿದೆ" ಎಂದು ಹೇಳಿ ತನ್ನ ಆಳುಗಳಿಂದ ಮನೆಯಲ್ಲಿದ್ದ ಆ ಕೊಡವನ್ನು ತರಿಸಿ ಬಾದಶಹನಮುಂದೆ ಇರಿಸಿದನು.

ಅದನ್ನು ಕಂಡು ಬಾದಶಹನು ಬೀರಬಲನ ಜಾಣತನಕ್ಕೆ ತಲೆದೂಗಿದನು. ಉಳಿದ ಮಂತ್ರಿಗಳೂ ದರಬಾರಿನವರೂ ದಂಗಾದರು. ಎಲ್ಲರೂ ಬೀರಬಲನ ಈ ಯುಕ್ತಿಯನ್ನು ಬಾಯ್ತುಂಬ ಹೊಗಳಿದರು.

ಕೂಡಲೆ ಬಾದಶಹನು ಸೇವಕರಿಂದ ಆ ತುಂಬಿದ ಕೊಡವನ್ನು ಸುಲ್ತಾನನ ಕಡೆಗೆ ಕಳಿಸಿದನು. ಹಾಗು ಅದರ ಜೊತೆಗೆ ಒಂದು ಪತ್ರವನ್ನು ಬರೆದು—"ಈ ಕೊಡದಲ್ಲಿಯ ಜಾಣತನವು ಕೇವಲ ನಮ್ಮ ಬೀರಬಲ ಮಂತ್ರಿಯದಾಗಿರುವದು. ನಿಮಗೆ ಇನ್ನೂ ಏನಾದರೂ ಅವಶ್ಯವಿದ್ದರೆ ನೇರವಾಗಿ ಬೀರಬಲನಿಗೆ ಬರೆದು ಪಡೆಯತಕ್ಕದ್ದು" ಎಂದು ತಿಳಿಸಿದನು.

ತುರ್ಕೀ ಸುಲ್ತಾನನು ತನ್ನ ರಾಜ ಸಭೆಯಲ್ಲಿ ಬೀರಬಲನ ಚಾತುರ್ಯವನ್ನು ಕೊಂಡಾಡಿ ಆ ಕೂಡಲೆ ಬಲು ದೊಡ್ಡ ಮೆಚ್ಚುಗೆಯನ್ನು ಬೀರಬಲನಿಗೆ ಕಳಿಸಿಕೊಟ್ಟನು.

## ಚಾಡಿ ಹೇಳುವವನಿಗೆ ಶಿಕ್ಷೆ

ಅಕಬರಬಾದಶಹನು ಬಲುರಸಿಕನು. ತಾನು ವಿದ್ವಾಂಸನಾಗಿರದಿದ್ದರೂ ಆತನು ಬಹು ಶ್ರುತನಾಗಿದ್ದನು. ದರಬಾರಿನ ಮುಂದೆ ಬಂದ ಪ್ರತಿಯೊಂದು ವಿಷಯವು ತನ್ನ ಮಂತ್ರಿಗಳೆಲ್ಲರಿಂದ ಚರ್ವಿತ ಚರ್ವಣವಾಗಿ ತನಗೆ ಮನದಟ್ಟಾಗುವ ವರೆಗೆ ಅದು ಪೂರ್ಣಗೊಳ್ಳುತ್ತಿರಲಿಲ್ಲ.

ಒಂದು ಸಾರೆ ರಾಜ ದರಬಾರಿನಲ್ಲಿ ಒಬ್ಬ ಚಾಡಿ ಹೇಳುವವನಿಂದ ಒದಗಿದ ದುರ್ಘಟನೆಯ ವ್ಯಾಜ್ಯವು ತೀರ್ಮಾನಿಗಾಗಿ ಬಂದಿತು. ಬಾದಶಹನ ನಿರ್ಣಯದಲ್ಲಿ ಚಾಡಿಖೋರನೇ ದೋಷಿಯೆಂದು ನಿರ್ಧಾರವಾಯಿತು. ಇನ್ನು ಆ ದೋಷಿಗೆ ಕೊಡುವ ಶಿಕ್ಷೆಯ ವಿಷಯದಲ್ಲಿ ಬಾದಶಹನು ತನ್ನ ಮಂತ್ರಿಗಳಿಗೆ–ಈ ಚಾಡಿ ಹೇಳಿದವನಿಗೆ ಎಂಥ ಶಿಕ್ಷೆಯು? ದಂಡವೆಷ್ಟು? ಎಂದು ಪ್ರಶ್ನೆ ಮಾಡಿದನು ಆ ಮಂತ್ರಿಗಳು ತಮ ತಮಗೆ ತಿಳಿದಂತೆ 'ಇಂತಿಷ್ಟು ದಿನ ಶಿಕ್ಷೆ, ಇಂತಿಷ್ಟು ರೂಪಾಯಿ ದಂಡ, ಇಂತಿಷ್ಟು ಪೆಟ್ಟಿನ ಶಿಕ್ಷೆ ಇತ್ಯಾದಿಯಾಗಿ ಹೇಳಿದರು. ಒಮ್ಮತದಿಂದ ಉತ್ತರ ಬಾರದ್ದರಿಂದ ಬಾದಶಹನು ಆಗಲೇ ನಿರ್ಣಯ ಕೊಡಲಿಲ್ಲ.

ಬೀರಬಲನು ನ್ಯಾಯಸ್ಥಾನಕ್ಕೆ ಬಂದ ಕೂಡಲೆ ಬಾದಶಹನು ಆತನಿಗೆ- "ಬೀರಬಲ! ಚಾಡಿ ಹೇಳುವವನಿಗೆ ಎಂಥ ಶಿಕ್ಷೆ?" ಎಂದು ಕೇಳಿದನು. ಆಗ ಬೀರಬಲನು- "ಪ್ರಭು! ಚಾಡಿ ಹೇಳುವವನು ನಿರ್ದೋಷಿಯು. ಆದರೆ ಆತನು ಹೇಳುವ ಚಾಡಿಯನ್ನು ಕಿವಿಗೊಟ್ಟು ಕೇಳುವವನು ಮಾತ್ರ ಸಂಪೂರ ದೋಷಿಯು. ಆದ್ದರಿಂದ ಚಾಡಿಖೋರನಿಗೆ ಶಿಕ್ಷೆ ಕೊಡದೆ ಚಾಡಿಯನ್ನು ಕೇಳುವವನ ಕಿವಿಗಳನ್ನೇ ಕೊಯ್ದು ಬಿಡುವದು ಯುಕ್ತವು" ಎಂದು ಸ್ಪಷ್ಟವಾಗಿ ಹೇಳಿದನು.

ಬಾದಶಹನಿಗೂ ಉಳಿದವರಿಗೂ ಬೀರಬಲನ ಹೇಳಿಕೆ ಸರಿಯೆನ್ನಿಸಿತು.

## ರಾಜಪುತ್ರನ ಬಗ್ಗೆ ಬೀರಬಲನ ಭವಿಷ್ಯ ಸೂಚನೆ

ರಾಜಪುತ್ರ ಸೇಲೀಮನು ಬಾದಶಹನ ಏಕಮೇವ ಪುತ್ರನು. ರಾಜರಾಣಿಯರಿಬ್ಬರೂ 'ಸೇಲೀಮ ಪೀರ' ನೆಂಬ ಸತ್ಪುರುಷನ ಸಮಾಧಿಗೆ ಬಹುಕಾಲ ಭಕ್ತಿಯಿಂದ ನಡೆದುಕೊಂಡು ಪುತ್ರ ಪ್ರಾಪ್ತಿಯನ್ನು ಹೊಂದಿದರು. ಆ ಸಾಧುವಿನ ಸ್ಮರಣೆಗಾಗಿಯೇ ಅವರು ತಮ್ಮ ಮಗನಿಗೆ 'ಸೇಲೀಮ' ಎಂದು ಹೆಸರಿಟ್ಟು ಸಂಬೋಧಿಸುತ್ತಿದ್ದರು. ಮಗುವಿನ ಸಂಗೋಪನದ ವಿಷಯವಾಗಿ ಅವರು ಒಳ್ಳೆ ದಕ್ಷತೆ ವಹಿಸುತ್ತಿದ್ದರು. ಕೂಸು ಎರಡು ವರ್ಷದ್ದಾಯಿತು. ಪ್ರೇಮದಿಂದ ಜೋಪಾಸನೆ ಹೊಂದಿದ ಆ ಮಗುವು ಅಷ್ಟಕ್ಕೆಷ್ಟಕ್ಕೆ ಹಟ ತೆಗೆದು ರಂಭಾಟ ಮಾಡಿ ಅಳಹತ್ತಿದ್ದಿತು. ಅದನ್ನು ರಮ್ಮಿಸಿ ಸಮಾಧಾನಪಡಿಸುವದೇ ರಾಣಿಗೆ ಬಲು ಕಷ್ಟವಾಗುತ್ತಿದ್ದಿತು.

ಒಂದಾನೊಂದು ದಿನದಲ್ಲಿ ಆ ಕೂಸು ಏನೋ ಒಂದು ನೆವದಿಂದ ಹಟ ತೆಗೆದು ಅಳಹತ್ತಿತು. ರಾಣಿಯೂ, ದಾಸಿಯರೂ ಏನೊಂದು ಬಗೆಯಿಂದ ಸಮಾಧಾನಪಡಿಸಿದರೂ ಸುಮ್ಮನಾಗಲೊಲ್ಲದು. ಕಡೆಗೆ ದರಬಾರಿನಿಂದ ಬಾದಶಹನೇ ಬಂದು ರಮ್ಮಿಸ ಹತ್ತಿದನು. ಹಲವು ತರದ ಆಟದ ಒಡವೆಗಳನ್ನು ಅವನ ಮುಂದೆ ಚೆಲ್ಲಿದರೂ ಅದು ಹಟ ಬಿಡಲಿಲ್ಲ. ಕಡೆಗೆರಾಜನು ಬಾಬರನ ಕಾಲದಲ್ಲಿದ್ದ ಒಂದು ಸರಾಯಿಯ ಶೀಸೆಯನ್ನು ಅದರ ಮುಂದೆ ಇಡಲು ಆ ಮಗುವು ಅದನ್ನು ತಕ್ಕೊಂಡು ಆಡಹತ್ತಿತು. ಮುತ್ತಜ್ಜನ

ಶಿರೆಯು ಶೀಸೆಯನ್ನು ಕೊಟ್ಟದ್ದರಿಂದ ತನ್ನ ಮಗನು ಅಳುವದನ್ನು ಬಿಟ್ಟನೆಂದು ಬಾದಶಹನು ಒಳ್ಳೆ ಹರುಷಗೊಂಡು ತನ್ನ ಧನ್ಯತೆಯನ್ನು ತಾನೇ ಸ್ಮರಿಸ ಹತ್ತಿದನು; ಹಾಗು ಮಗುಗಳನ್ನು ರಮ್ಮಿಸುವಲ್ಲಿ ತನಗೆಸರಿ ಯಾರೂ ಇಲ್ಲವೆಂದು ಆತನು ಹೆಮ್ಮೆ ಪಡಹತ್ತಿದನು.

ಮರುದಿನ ನಿತ್ಯದಂತೆ ದರಬಾರು ನೆರೆಯಿತು. ಬಾದಶಹನೂ ಬಂದನು. "ಅಳುವ ಚಿಕ್ಕ ಮಕ್ಕಳನ್ನು ರಮ್ಮಿಸುವದು ಸುಲಭವೆ?" ಎಂಬ ಪ್ರಶ್ನೆಯನ್ನು ಆತನು ತನ್ನ ಸಭಿಕರೆದುರು ಇಟ್ಟನು. ಬೀರಬಲನ ಹೊರತು ಎಲ್ಲರೂ 'ಯಾರಿಗಾದರೂ ಸಾಧ್ಯವಿದೆ' ಎಂದು ಉತ್ತರಿಸಿದರು. ಬಾದಶಹನಾದರೂ ಅವರ ಉತ್ತರಕ್ಕೆ ಸಮ್ಮತಿಸಿ ರಾಜಮಂದಿರದಲ್ಲಿ ತನ್ನ ಮಗನು ಹಟ ಮಾಡಿದ್ದನ್ನೂ ಅವನನ್ನು ರಮ್ಮಿಸುವದು ಬೇಗಮ್ಮರಿಗೆ ಸಾಧ್ಯವಾಗದಿದ್ದರೂ ಅವನ ಕೈಯಲ್ಲಿ ಒಂದು ಶೀಸೆಯನ್ನು ಕೊಟ್ಟು ತಾನು ಸಮಾಧಾನಪಡಿಸಿದೆ ನೆಂದೂ ಒಳ್ಳೆ ಆಢ್ಯತೆಯಿಂದ ಹೇಳಿದನು.

ಬಾದಶಹನು ಹೇಳುತ್ತಿರುವದನ್ನು ಬೀರಬಲನು ಕೇಳಿ ಎದ್ದು ನಿಂತು– "ಪ್ರಭು! ಹಟಹಿಡಿದು ಅಳುತ್ತಿರುವ ಮಗುಗಳನ್ನು ರಮ್ಮಿಸುವದು ಯಾರಿಗೂ ಸಾಧ್ಯವಿಲ್ಲ. ಅವಶ್ಯವಿದ್ದರೆ ಪ್ರಭುಗಳ ಚಿತ್ತಕ್ಕೆ ಇದರ ಅನುಭವವನ್ನು ಮಾಡಿ ಕೊಡುವೆನು. ಅದೇನೇ ಇರಲಿ· ಚಿಕ್ಕವನಾದ ಸೇಲೀಮನನ್ನು ನೀವು ರಮ್ಮಿ ಸಿದೆವೆಂದು ಹೇಳುವಿರಿ. ನಿಜವಾಗಿ ಅವನು ನಿಮ್ಮಿಂದ ಸುಮ್ಮನಾಗದೆ ತಾನೇ ಅಳುವದನ್ನು ಬಿಟ್ಟನು. ಯಾಕಂದರೆ ಆ ಮಗುವಿನ ಆಜನ್ಮ ಸಂಗಡಿಗವಾದ ಸರಾಯಿಯ ಶೀಸೆಯು ಕೈಗೆ ಬಂದ ಕೂಡಲೆ ಅದು ತನ್ನ ಭವಿಷ್ಯತ್ ಸೂಚನೆಯನ್ನು ವ್ಯಕ್ತಪಡಿಸಿತೇ ಹೊರತು ನಿಮ್ಮ ರಮ್ಮಿಸುವದನ್ನು ಸ್ವೀಕರಿಸಲಿಲ್ಲ" ಎಂದು ಸ್ಪಷ್ಟ ನುಡಿದನು.

ಬೀರಬಲನ ನುಡಿಗಳಿಂದ ಬಾದಶಹನು ಕ್ಷಣ ಕಾಲ ಮುಗ್ಧನಾಗಿ ಕುಳಿ ತನು. ತನ್ನ ಮಗನು ಮುಂದೆ ಸೆರೆ ಗುಡಕನಾಗಬಹುದೇ? ಎಂಬ ಯೋಚ ನೆಯೊಳಗೇ ದರಬಾರನ್ನು ಮುಗಿಯಿಸುವ ಹೊತ್ತಾಯಿತು. ಆತನು ತನ್ನ ಆಸನದಿಂದ ಎದ್ದು ಭವಿಷ್ಯತ್ ಚಿಂತನದಲ್ಲಿಯೇ ರಾಣೀವಾಸಕ್ಕೆ ತೆರಳಿದನು.

## - ಬೀರಬಲನು ಬಾಲಕನಾಗಿ ಹಟ ಮಾಡಿದ್ದು.

ಬೀರಬಲನು ಬಾದಶಹನಿಗೆ ಸೇಲೀಮನ ಭವಿಷ್ಯ ಸೂಚನೆಯನ್ನು ತಿಳಿಸಿದ ಒಂದೆರಡು ದಿನಗಳ ಮೇಲೆ ದರಬಾರು ನೆರೆಯಿತು. ಸಭಿಕರೆಲ್ಲರೂ ಮಿಲಿತರಾದರು. ಬಾದಶಹನು ಬಂದು ಸ್ಥಾನಾಪನ್ನನಾಗಿ– "ಬೀರಬಲ! ಸಣ್ಣ ಹುಡುಗರನ್ನು ಅವರ ಹಟದಿಂದ ಸಮಾಧಾನ ಪಡಿಸುವದು ಅಸಾಧ್ಯ" ಎಂದು ನೀವು ಹೇಳಿರುವಿರಿ. ಅದು ಹೇಗೆ? ನಮಗೆ ಅದರ ಅನುಭವವನ್ನು ತಂದುಕೊಡಬೇಕು. ನಾವಂತೂ ನಿಮ್ಮ ಈ ಮತಕ್ಕೆ ವಿರೋಧವಿರುವೆವು" ಎಂದು ಕೇಳಿದನು.

ಬಾದಶಹನ ಆತುರತೆಯನ್ನು ಕಂಡು ಬೀರಬಲನು ಎದ್ದು ನಿಂತು– "ಪ್ರಭುಗಳೇ ಇಚ್ಛೆಯಂತೆ ನಡೆಯಲಿ. ಆದರೆ ಕೆಲ ಹೊತ್ತು ನೀವು ನನ್ನ ಮಾತಿನಂತೆ ನಡೆದರೆ ಮಾತ್ರ ನಾನು ಇದರ ಪ್ರತೀತಿಯನ್ನು ತಂದು ಕೊಡುವೆನು" ಎನ್ನಲು ಬಾದಶಹನು– 'ಅದೇನು? ಹೇಳು. ನಿನ್ನ ಮಾತನ್ನು ನಡೆಯಿಸುವೆನು' ಎಂದನು.

ಬಳಿಕ ಬೀರಬಲನು ಬಾದಶಹನಿಗೆ– "ನೀವು ನನ್ನ ತಂದೆಯಾಗಿರಿ, ನಾನು ನಿಮ್ಮ ಬಾಲಕನಾಗಿ ಅಂಬೆಗಾಲಿಕ್ಕಿ ನಿಮ್ಮನ್ನು ಕಾಡುವೆನು" ಎಂದು ಹೇಳಿ ತಾನು ತನ್ನ ಸ್ಥಳದಿಂದ ಅಂಬೆಗಾಲಿಕ್ಕುತ್ತ 'ಅಪ್ಪಾ, ಅಪ್ಪಾ ನನ್ನನ್ನು ಎತ್ತಿಕೋ' ಎಂದು ತೊದಲು ನುಡಿಯಾಡಿದನು. ಬಾದಶಹನು ಆ ಬಾಲಕನ ತಂದೆಯಾಗಿ ಅವನನ್ನು ಮೇಲೆತ್ತಿ ಇಳಿಸಿದನು. ಆಗ ಬಾಲಕನು– 'ಅಪ್ಪಾ ನನಗೆ ಹಸಿವೆಯಾಗಿದೆ' 'ನನಗೆ ಆಟದೊಡಿವೆ ಬೇಕು' 'ಅಪ್ಪಾ ನನ್ನನ್ನು ಕುರೀಮರೀ ಮಾಡು' 'ಅಪ್ಪಾ ನನಗೆ ದುಡ್ಡು ಕೊಡು' ಈ ಬಗೆಯಾಗಿ ಹಲವು ರೀತಿಯಿಂದ ಅಪ್ಪನನ್ನು ಕಾಡಿದನು. ಅಪ್ಪನು ಮಗನ ಬೇಡಿಕೆಗಳೆಲ್ಲವನ್ನೂ ಪೂರೈಸಿದನು. ಕಡೆಗೆ ಆ ಕೃತಕ ಬಾಲಕನು 'ಅಪ್ಪಾ ನನಗೆ ದೊಡ್ಡ ಆನೆ ಕೊಡು' ಎನ್ನಲು ಅಪ್ಪನು ಒಂದು ಕಟ್ಟಿಗೆಯ ಆನೆ ತಂದು ಕೊಟ್ಟನು. ಆಗ ಬಾಲಕನು– 'ಉಂಹೂ ನನಗೆ ನಿಜವಾದ ಆನೆಯೇ ಬೇಕು' ಎಂದು ಹಟ ಹಿಡಿದನು. ಆಗ ಅಪ್ಪನಾದ ಬಾದಶಹನ ಅಪ್ಪಣೆಯಿಂದ ಮಾವುತನು ಗಜಶಾಲೆ

ಯಿಂದ ಆನೆಯೊಂದನ್ನು ತಂದು ನಿಲ್ಲಿಸಿದನು. ಆಗ ಆ ಕೃತಕ ಬಾಲಕನು ಅಂಬೆಗಾಲಿಕ್ಕುತ್ತ ಹೋಗಿ ಅದರ ಸೊಂಡಿಲವನ್ನು ಹಿಡಿದು ಆಡಿದನು. ಕಾಲನ್ನು ಹಿಡಿದು ನೋಡಿದನು. ಅದರ ಕೋರೆಯನ್ನು ಮುಟ್ಟಿ ಜಗ್ಗಿದನು. ಇದೆಲ್ಲವನ್ನು ಸಭಿಕರೂ ಬಾದಶಹನೂ ಒಳ್ಳೆ ಕೌತುಕದಿಂದ ನಿರೀಕ್ಷಿಸುತ್ತ ಕುಳಿತರು. ಬಳಿಕ ಆ ಕೃತಕ ಬಾಲಕನು ಅಪ್ಪನ ಹತ್ತರ ಬಂದು ತನ್ನ ತೊದಲು ನುಡಿಯಿಂದ 'ಅಪ್ಪಾ ಆ ಆನೆಯನ್ನು ಈ ಮಾಡಿನಲ್ಲಿ ಇಡು' ಎಂದು ಹೇಳಿದನು. ಮತ್ತೂ ಮತ್ತೂ ಹೇಳಿದನು. ಕೊರಳಿಗೆ ಅಟ್ಟಿ ಮುಟ್ಟಿ ಹಾಕಿ 'ಯಾಕೊ ಅಪ್ಪಾ ಈ ಆನೆಯನ್ನು ಆ ಮಾಡದಲ್ಲಿ ಕಟ್ಟೋ' ಎಂದು ಹಟ ಹಿಡಿದನು.

ಅಪ್ಪನಾದ ಬಾದಶಹನಿಗೆ ಈಗ ಒಳ್ಳೆ ವಿಚಾರ ಬಿದ್ದಿತು. ಆ ಬಾಲಕನಿಗೆ ಏನು ಹೇಳಿದರೂ ಕೇಳಲೊಲ್ಲನು. ಕಡೆಗೆ ಅಪ್ಪನಿಗೆ ಏನೂ ಕೈಸಾಗದಂತಾಯಿತು. ಆಗ ಆತನು–"ಬೀರಬಲ! ನಿನ್ನ ಮಾತು ನಿಜವದೆ. ಬಾಲಕರ ಹಟದಂತೆ ಅವರನ್ನು ಸಂತುಷ್ಟಗೊಳಿಸುವದು ಕಷ್ಟವೂ ಅಸಾಧ್ಯವೂ ಆಗಿರುವದು" ಎಂದು ಒಡಂಬಟ್ಟನು.

ಸಭಿಕರೆಲ್ಲರೂ ಬೀರಬಲನ ಚಾತುರ್ಯಕ್ಕೆ ಬೆರಗಾದರು. ಬಾದಶಹನು ಬೀರಬಲನನ್ನು ಮರ್ಯಾದಿಸಿದನು.

## — ಸಮರ್ಪಕ ಉತ್ತರ —

ಬಾದಶಹ–ಬೀರಬಲರೀರ್ವರೂ ದರಬಾರಿನಲ್ಲಿ ಸ್ವಾರಸ್ಯಮಯ ಹರಟೆ ಕೊಚ್ಚುತ್ತ ಕುಳಿತಾಗ ಬಾದಶಹನು ತನ್ನ ಹಸ್ತವನ್ನು ನಿರೀಕ್ಷಿಸಿ–'ಬೀರಬಲ! ನನ್ನ ಅಂಗೈಯಲ್ಲಿ ಕೂದಲುಗಳೇಕೆ ಬೆಳೆದಿರುವದಿಲ್ಲ?' ಎಂದು ಪ್ರಶ್ನೆ ಮಾಡಿದನು. ಕೂಡಲೆ ಬೀರಬಲನು–'ಪ್ರಭು! ದೀನರಿಗೆ ದಾನವನ್ನೂ ವಿದ್ವಾಂಸರಿಗೆ ಪಾರಿತೋಷಕಗಳನ್ನೂ ನೀಡಿ ನೀಡಿ ನಿಮ್ಮ ಅಂಗೈಯಲ್ಲಿಯ ಕೂದಲುಗಳು ಬೆಳೆಯದೆ ಹೋಗಿರುವವು' ಎಂದನು. ಅದನ್ನುಕೇಳಿ ಬಾದಶಹನು-'ಹಾಗಾದರೆ ನಿನ್ನಅಂಗೈಯಲ್ಲಿಯಾಕೆಇಲ್ಲ?' ಎಂದು ಕೇಳಿದನು.ಅದಕ್ಕೂ ಬೀರಬಲನು-'ಜೀಯ! ನೀವು ನೀಡುತ್ತಿರುವ ಪಾರಿತೋಷಕಗಳನ್ನು ಕೊಂಡು

ಕೊಂಡು ನನ್ನ ಅಂಗೈಗೂದಲುಗಳು ನಾಶವಾಗಿರುವವು' ಎಂದನು. ಬಾದಶಹನು ಇಷ್ಟಕ್ಕೂ ಸುಮ್ಮನಾಗದೆ-"ಬೀರಬಲ! ಈ ದರಬಾರಿನ ಸಭಾಸದರೆಲ್ಲರ ಅಂಗೈಗೆ ಕೂದಲು ಏಕೆ ಇಲ್ಲ? ಎಂದು ಕೇಳಿದನು ಆಗ ಬೀರಬಲನು— "ಮಹಾರಾಜ ಈ ಕಾರಣವಂತೂ ಸ್ಪಷ್ಟವದೆ. ನೀವು ನಮ್ಮಂಥವರಿಗೆ ಪಾರಿತೋಷಕವನ್ನೀಯುವದನ್ನು ಕಂಡು ಇವರೆಲ್ಲರು ಹೊಟ್ಟೆಕಿಚ್ಚಿನಿಂದ ತಮ್ಮ ಕೈಗಳನ್ನು ತಿಕ್ಕಿ ತಿಕ್ಕಿ ಅಂಗೈಕೂದಲುಗಳನ್ನು ಕಳೆದುಕೊಂಡಿರುವರು" ಎಂದನು.

ಬೀರಬಲನ ಈ ಸಮರ್ಪಕ ಉತ್ತರಗಳಿಂದ ಬಾದಶಹನು ಸಂತುಷ್ಟನಾದನು.

## ರೋಮು ರಾಜನಲ್ಲಿ ಬೀರಬಲನು

ರೋಮು (ಇಟಲಿ) ನಗರದ ಬಾದಶಹನು ಬೀರಬಲನ ಚಾತುರ್ಯದ ಪ್ರಶಂಸೆಯನ್ನು ಕೇಳಿ ಅವನನ್ನು ಕಾಣುವ ತವಕವುಳ್ಳವನಾದನು. ಅವನು ಅಕಬರ ಬಾದಶಹನಿಗೆ ಪತ್ರ ಬರೆದು ಬೀರಬಲನನ್ನು ತನ್ನ ರಾಜಧಾನಿಗೆ ಕರೆಯಿಸಿಕೊಂಡನು. ಅಲ್ಲಿ ಹೋದ ನಂತರ "ತಮ್ಮಲ್ಲಿ ವಿದೇಶದ ವಿದ್ವಾಂಸನ ಆಗಮನವಾಗಿದೆ" ಎಂದು ಅಲ್ಲಿಯವರು ಬೀರಬಲನನ್ನು ಒಳ್ಳೆ ಸಂಭ್ರಮದಿಂದ ಸ್ವಾಗತ ಮಾಡಿಕೊಂಡರು, ಹಾಗು ಅವನ ವಾಸ್ತವ್ಯಕ್ಕಾಗಿ ದಿವ್ಯವಾದ ಒಂದು ಮಂದಿರವನ್ನು ವ್ಯವಸ್ಥೆಗೊಳಿಸಿದರು. ರಾಜೋಪಚಾರಕ್ಕನುಸರಿಸಿ ಸರ್ವ ಸಿದ್ಧತೆಯು ರೋಮ ರಾಜನ ಅಪ್ಪಣೆಯಿಂದ ನೆರವೇರಿಸಲ್ಪಟ್ಟಿತು. ಬೀರಬಲನು ಒಂದು ವಾರದ ವರೆಗೆ ಅಲ್ಲಿ ಇದ್ದು ಅಲ್ಲಿಂದ ತಿರುಗುವ ಮುನ್ನಾದಿನವೇ ಆ ರಾಜನ ಸಭೆಗೆ ಹೋದನು.

ರೋಮದ ಆ ರಾಜನು ಬಲು .ರಸಿಕನು. ಬೀರಬಲನ ಖ್ಯಾತಿಯನ್ನು ಕೇಳಿದ ಆತನು ತಾನೂ ಭಾರತದ ರಾಜರಸಿಕನ ಚಾತುರ್ಯವನ್ನು ಪರೀಕ್ಷಿಸುವದಕ್ಕಾಗಿ ಒಂದು ಕೌತುಕ ದರ್ಶಕವಾದ ಯೋಜನೆಯನ್ನು ಮಾಡಿ ದರಬಾರವನ್ನು ಅಂದಗೊಳಿಸಿದ್ದನು. ತನ್ನ ದರಬಾರಿನ ಪ್ರತಿಯೊಬ್ಬರಿಗೆ ತನ್ನಂತೆಯೇ ವೇಷ-ಭೂಷಣಗಳ ಹಾಗು ಆಸನಗಳ ವ್ಯವಸ್ಥೆ ಮಾಡಿದ್ದನು. ಬೀರಬಲನು ದರಬಾರವನ್ನು ಪ್ರವೇಶ ಮಾಡಿದ ಕೂಡಲೆ

ಅವನಿಗೆ ತನ್ನ ಪರಿಚಯ ತಿಳಿಯುಬಾರದು; ಹಾಗು ಆ ಬೀರಬಲನು ತನ್ನ ಚಾತುರ್ಯದಿಂದ ತನ್ನನ್ನು ಗುರುತಿಸಬೇಕು; ಇದೇ ಉದ್ದೇಶವಿದ್ದಿತು. ಆತನು ತನ್ನ ದರಬಾರಿನಲ್ಲಿ ಈ ಪ್ರಕಾರ ವ್ಯವಸ್ಥೆಯಿಟ್ಟು ತಾನೂ ಸಭಿಕ ರೊಳಗೇ ಕುಳಿತಿದ್ದನು.

ಮೊದಲೇ ಕಾರ್ಯಕ್ರಮಗೊತ್ತಾದಂತೆನಿಶ್ಚಿತವೇಳೆಗೆಬೀರಬಲನುಕುದುರೆ ಯನ್ನೇರಿ ರಾಜ ಸಭೆಗೆ ಹೋದನು. ದ್ವಾರದಲ್ಲಿ ನಿಂತು ಸ್ವಾಗತಿಸುವವರ ಮುಜುರೆಗಳನ್ನು ಸ್ವೀಕರಿಸಿ ಒಳ ಸೇರಿದನು. ನೋಡುತ್ತಾನೆ, ತನಗಾಗಿ ಸಿದ್ಧ ಪಡಿಸಿದ ಆಸನದ ಜೊತೆಗೆ ರಾಜನ ಆಸನವು ಬರಿದಾಗಿದ್ದಿತು. "ರಾಜನು ಬಂದಿರುವನು" ಎಂದು ಆತನು ಮೊದಲೇ ತಿಳಿದುಕೊಂಡಿದ್ದು ಈಗ ದರಬಾರಿ ನಲ್ಲಿ ರಾಜನಿಲ್ಲದ್ದನ್ನು ಕಂಡು ದರಬಾರಿನಲ್ಲಿ ಹೋಗ ಹೋಗುತ್ತಾ ವಿಚಾರ ಮಾಡಹತ್ತಿದನು. ಸಮವಸ್ತ್ರಭೂಷಿತರಾದವರೆಲ್ಲರನ್ನು ಸೂಕ್ಷ್ಮ ಬಗೆಯಿಂದ ನೋಡುತ್ತ ಮುಂದೆ ಸಾಗಿದನು. ಸಾವಕಾಶವಾಗಿ ಬಂದು ಆ ಗುಂಪಿನಲ್ಲಿ ಕುಳಿತಿದ್ದ ರಾಜನ ಮುಂದೆ ತನ್ನ ಸ್ನೇಹ ಹಸ್ತವನ್ನು ನೀಡಿದನು. ಕೂಡಲೆ ಆ ರಾಜನು ಚಕಿತನಾಗಿ ಬೀರಬಲನ ಕೈಯನ್ನು ಹಿಡಿದು ಕುಲು ಕುಲು ನಗುತ್ತ ಕುಲುಕಿದನು. ಅಂತಃಕರುಣ ವುಕ್ಕೇರಿ ಬೀರಬಲನನ್ನು ಅಪ್ಪಿ ಕೊಂಡನು. ಬಳಿಕ ಅವರಿಬ್ಬರು ತೆರವಿದ್ದ ತಮ್ಮ ಆಸನಗಳ ಮೇಲೆ ಹೋಗಿ ಕುಳಿತರು. ಅದನ್ನು ಕಂಡು ದರಬಾರಿನ ಎಲ್ಲರೂ ತಮಗಾದ ಆನಂದವನ್ನು ಬೀರಬಲನ ಹಾಗು ಅವನಿಗೆ ಆಶ್ರಯ ನೀಡಿದ್ದ ಅಕಬರ ಬಾದಶಹನ ಹೆಸರಿನಿಂದ ಜಯ ಜಯಕಾರ ಮಾಡಿದರು.

ಪದ್ಧತಿಯ ಪ್ರಕಾರ ದರಬಾರಿನ ಅಂದಿನ ಕಾರ್ಯಕ್ರಮಗಳೆಲ್ಲವೂ ಮುಕ್ತಾಯಗೊಂಡವು.

ಕೊನೆಗೆ ರೋಮ ರಾಜನು ಎದ್ದುನಿಂತು- "ಬೀರಬಲ ಮಹಾಶಯರೆ! ಈ ಮೊದಲು ನನ್ನ ಹಾಗು ನಿಮ್ಮ ದರ್ಶನವೆಂದೂ ಆಗಿರಲಿಲ್ಲ. ಇಂತು ಅಪರಿಚಿತರಾದ ನೀವು ಸಾವಿರಾರು ಸಭಿಕರಲ್ಲಿ ನನ್ನನ್ನೇ ಹೇಗೆ ಗುರುತಿಸಿದಿರಿ? ಇದನ್ನು ದಯಮಾಡಿ ತಿಳಿಸುವದಾಗಬೇಕು. ನನ್ನ ಸಭಿಕರೆಲ್ಲ ನಿಮ್ಮ ಈ ಚಾತುರ್ಯದ ಬಗೆಗೆ ಜಿಜ್ಞಾಸುಗಳಾಗಿ ಕುಳಿತಿರುವರು" ಎಂದನು.

ಬೀರಬಲನು ರೋಮರಾಜನಾಡಿದ ನುಡಿಗಳನ್ನು ಕೇಳಿ ಮುಗುಳು ನಗೆ ನಗುತ್ತ- "ಬಾದಶಹರೆ! ನಾನು ನಿಮ್ಮನ್ನು ಗುರುತಿಸುವಲ್ಲಿ ಅಷ್ಟೊಂದು ಆಯಾಸಪಡಲಿಲ್ಲ. ಇಂದು ನೀವು ಸಭಿಕರೊಳಗೆ ಅಭಿನ್ನ ಸ್ವರೂಪದಿಂದ ಕುಳಿತಿದ್ದರೂ ತಾರತಮ್ಯ ಭಾವದ ಮೂಲಕ ಸಭಿಕರೆಲ್ಲರ ದೃಷ್ಟಿಯು ನಿಮ್ಮ ಕಡೆಗೆ ಇದ್ದುದರಿಂದ ನಿಮ್ಮನ್ನು ನಾನು ಸಹಜವಾಗಿ ಕಂಡುಹಿಡಿದೆನು. ಇದರಲ್ಲೇನು ಚತುರತೆ?" ಎಂದು ನಿರಭಿಮಾನದಿಂದ ನುಡಿದನು.

ಸಭಿಕರೂ ರಾಜನೂ ಬೀರಬಲನ ಜಾಣತನಕ್ಕೆ ತಲೆದೂಗಿ ರಾಜ ಮನ್ನಣೆಯಿಂದ ಅವನನ್ನು ಬೀಳ್ಕೊಟ್ಟರು.

# ರಾಣಾ ಪ್ರತಾಪನಿಂದ ಬೀರಬಲನಿಗೆ ಪ್ರಶಸ್ತಿ ಪತ್ರಿಕೆ

ಬಾದಶಹನ ದರಬಾರಿನಲ್ಲಿದ್ದ ನವ ಪಂಡಿತರಲ್ಲಿ ಬುದ್ಧಿ ಚಾತುರ್ಯದಿಂದ ಬೀರಬಲನೂ, ಗಾನ-ತಾನಗಳಿಂದ ತಾನಸೇನ ಗವಾಯಿಯೂ ಮಿಗಿಲಾದವರೆಂದು ಸಭಿಕರೆಲ್ಲರು ಬಾಯ್ತುಂಬಾ ಹೊಗಳುತ್ತಿದ್ದರು. ಇದನ್ನೇ ವಿಂಗಡಿಸಿ ಹೇಳುವದಾದರೆ- ಹಿಂದುಗಳು ತಮ್ಮ ಬೀರಬಲನನ್ನು, ಮುಸಲ್ಮಾನರು ತಮ್ಮ ತಾನಸೇನನನ್ನು ತಾರತಮ್ಯದ ತಕ್ಕಡಿಯಲ್ಲಿ ತೂಗಿ ತಮ್ಮವನೇ ಹೆಚ್ಚು ಯೋಗ್ಯತೆಯುವನು; ಇನ್ನೊಬ್ಬನು ನಮ್ಮವನಿಗಿಂತಲೂ ಕೆಳಗು ಎಂಬದಾಗಿ ಪ್ರಕಟವಾಗಿ ಮಾತಾಡಹತ್ತಿದರು. ಜನತೆಯ ಈ ನುಡಿಗಳು ಆ ಪಂಡಿತದಯರ ಕಿವಿಗಳಿಗೆ ಬೇಳದೆಬಿಡಲಿಲ್ಲ. ಅದರಿಂದ ಅವರಿಬ್ಬರ ಹೃದಯದಲ್ಲಾದರೂ ಆತ್ಮೀಯ ಪಾಂಡಿತ್ಯದ ಬಗೆಗೆ ಅಹಂಕಾರಗಳು ಉದಿಸಿದವು.

ತಾನಸೇನ - ಬೀರಬಲರಲ್ಲಿ ಅಂಕುರಗೊಂಡ ಅಹಂಕಾರದ ಬೀಜವು ದಿನದಿನಕ್ಕೂ ಬೆಳೆದು ಅದು ಬಾದಶಹನ ದರಬಾರದ ತುಂಬೆಲ್ಲ ತನ್ನ ಪ್ರಸ್ತಾರವನ್ನು ಹಾಕತೊಡಗಿತು. ಚಾಣಾಕ್ಷನಾದ ಅಕಬರ ಬಾದಶಹನು 'ಇವರು ಘನ ವಿದ್ವಾಂಸರಾಗಿದ್ದರೂ ಇವರಲ್ಲಿ ಲೋಕವ್ಯವಹಾರಕ್ಕನುಸರಿಸಿದ ಮೇಲುಬುದ್ಧಿಯಿಲ್ಲ' ಎಂದು ಮನಸ್ಸಿನಲ್ಲಿ ತಿಳಿದುಕೊಂಡು 'ಇವರಿಬ್ಬರ ಯೋಗ್ಯತೆಯನ್ನು ನಾನೇ ವರೆಗ್ಗುಚ್ಚದೆ ಇನ್ನೊಬ್ಬರಿಂದ ಆ ಕಾರ್ಯ ಮಾಡಿಸು

ವದು ತಕ್ಕದ್ದು' ಎಂದು ನಿಶ್ಚಯಮಾಡಿಕೊಂಡನು. ಹಾಗೂ ಆ ಸಮಯ ವನ್ನು ಕಾಯುತ್ತಿದ್ದನು.

ಮುಂದೆ ಒಂದೆರಡು ದಿನಗಳ ನಂತರ ದರಬಾರು ನೆರೆದ ಸಮಯದಲ್ಲಿ ಒಂದೇ ಸಾಲಿನಲ್ಲಿ ಹೊಂದಿ ಕುಳಿತಿದ್ದ ಬೀರಬಲ-ತಾನಸೇನರಲ್ಲಿ ನಿಬ್ಬರದ ವಾಗ್ಯುದ್ಧ ಉಂಟಾಯಿತು. ಬಾದಶಹನು ಅಧ್ಯಕ್ಷ ಸ್ಥಾನದಿಂದ ಸೂಕ್ಷ್ಮವಾಗಿ ಅವರನ್ನು ಅವಲೋಕಿಸಿ ಅವರಿಗೆ ಏನೊಂದು ಆಜ್ಞೆ ಮಾಡುವ ಅವಸರದ ಮೊದಲೇ ಅವರಲ್ಲಿ ಮುಷ್ಟಿ ಯುದ್ಧವೇ ಸುರುವಾಗಿ ಬಿಟ್ಟಿತು. ಮಾನಸಿಂಗ, ಫೈಜಿ ಮೊದಲಾದ ಪಂಡಿತರು ತಮ್ಮ ಆಸನದಿಂದ ಎದ್ದು ಹೋಗಿ– "ತಾನ ಸೇನ-ಬೀರಬಲರೇ ಈ ನಿಮ್ಮ ವರ್ತನೆಯು ಸಭೆಯ ಶಿಸ್ತಿಗೆ ಅಕ್ರಮವೆನಿಸು ವದು. ಶಾಂತರಾಗಿರಿ. ಬಾದಶಹನ ಕೋಪಕ್ಕೆ ಗುರಿಯಾಗಿ ಹೀನ ದೆಸೆ ಪಡೆ ಯಬೇಡಿರಿ" ಎಂದು ಹಲವು ಬಗೆಯ ಸಾಂತ್ವನಪರ ಮಾತುಗಳಿಂದ ಅವ ರನ್ನು ಶಾಂತಗೊಳಿಸಿ ಕುಳ್ಳಿರಿಸಿದರು.

ಸೂಕ್ಷ್ಮಾವಲೋಕನದಿಂದ ಕಾಣುವಬಾದಶಹನು ಆಪಂಡಿತರ ಗುದ್ದಾ ಟವನ್ನು ನೋಡಲಾರದೆ ಏನೊಂದು ನೆವದಿಂದ ದರಬಾರು ಮುಕ್ತಾಯ ಗೊಳಿಸಿ ನಡೆದನು. ಸಭಿಕರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ದರಬಾರಿನಿಂದ ಹೊರಬಿದ್ದು ಬೇರೆ ಬೇರೆ ಮಾರ್ಗಗಳಿಂದ ಆ ಪಂಡಿತ ದ್ವಯರು ಒಬ್ಬರ ಮೇಲೊಬ್ಬರು ಕೆಂಡಕಾರುತ್ತ ದೃಷ್ಟಿ ಪಥವು ಮೀರುವ ವರೆಗೂ ಮೀಸೆ ಹುರಿಗೊಳಿಸುತ್ತ ನಡೆದರು. ಬಾದಶಹನು ಅಂತಸ್ತದಲ್ಲಿ ನಿಂತು ಇದನ್ನೂ ಕಾಣದಿರಲಿಲ್ಲ.

ಮರು ದಿನ ಬೆಳಗಿನಲ್ಲಿ ಅಕಬರ ಬಾದಶಹನು ಅವರಿಬ್ಬರನ್ನು ಕರೆ ಯಿಸಿಕೊಂಡು– "ಪಂಡಿತ ಮಹಾಶಯರೆ! ನಿನ್ನಿನ ಊಟದಿಂದ ನನ್ನಲ್ಲಿ ನಿಶ್ಚ ಯವಾಗಿ ಬಲ ಬಂದಿದೆ. ಆದರೆ ಇಂದಿನ ಊಟವು ಮರಣವನ್ನೆಲ್ಲಿ ಉಂಟು ಮಾಡುವದೋ ಎಂಬ ಹೆದರಿಕೆ ನನಗಿದೆ. ಇದರ ಗೂಢವನ್ನು ನಿಮಗೆ ಹೇಳ ಬೇಕಾಗಿಲ್ಲ. ಅದೇನೇ ಇರಲಿ. ನೀವಿಬ್ಬರು ನನ್ನ ದರಬಾರಿನ ಗಗನಾಂಗಣದ ಸೂರ್ಯ-ಚಂದ್ರಮರಂತಿರುವಿರಿ. ಆದರೆ ಸೂರ್ಯರಾರು, ಚಂದ್ರರಾರು ಎಂದು

ಮಾತ್ರ ನನ್ನನ್ನು ಕೇಳಬೇಡಿರಿ. ನಾನು ಮಾತ್ರ ಅಭೇದವಾದಿಯು. ಅಭಿನ್ನ ದರ್ಶಕನು. ಈ ಮಾತನ್ನು ಸತ್ಯವಾಗಿ ನಂಬಿರಿ" ಎಂದು ಹೇಳಿದನು.

ಆ ತರುಣ ಪಂಡಿತರ ಹೃದಯದ ಬಿಸಿ ರಕ್ತವು ಇನ್ನೂ ಕುದಿಯುತ್ತಿರುವಾಗ ಬಾದಶಹನ ಬೋಧೆಯನ್ನು ಅವರು ಒಬ್ಬರನ್ನೊಬ್ಬರು ವೈಷಮ್ಯಪೂರ್ಣ ದೃಷ್ಟಿಯಿಂದ ನಿರೀಕ್ಷಿಸುತ್ತ ಸ್ವೀಕರಿಸದಾದರು.

ಕೊನೆಗೆ ನಿರ್ವಾಹವಿಲ್ಲದೆ ಬಾದಶಹನು ಉದಯಪುರದ ರಾಣಾ ಪ್ರತಾಪಸಿಂಗನಿಗೆ ಒಂದುಓಲೆಯಲ್ಲಿ–"ಮಹದ್ಬಲವಂತ ರಾಣಾರವರೇ! ಈಗ ನಿಮ್ಮ ದರ್ಶನಕ್ಕೆ ಬಂದಿರುವ ಪಂಡಿತದ್ವಯರನ್ನು ಅವರವರ ಬುದ್ಧಿವಂತಿಕೆಗಳಲ್ಲಿ ಪರೀಕ್ಷಿಸಿ ಪ್ರಶಸ್ತಿಪತ್ರ ಸಹಿತವಾಗಿ ಕಳಿಸಿಕೊಡುವದಾಗಬೇಕು" ಎಂದು ಬರೆದು ಅದನ್ನು ಸಹಿತವಾಗಿ ಅವರಿಬ್ಬರನ್ನೂ ರಾಣಾನ ಬಳಿಗೆ ಕಳಿಸಿಕೊಟ್ಟನು.

ಬೀರಬಲನೂ ತಾನಸೇನನೂ ಉದಯಪುರಕ್ಕೆ ಬಂದರು. ಬಾದಶಹನ ಓಲೆಯು ರಾಣಾನ ಕೈಸೇರಿತು. ಅದನ್ನು ಆತನು ಓದಿಕೊಂಡು ಅವರನ್ನು ಕುರಿತು–"ಪಂಡಿತರೇ! ಮುಂದೇನು?" ಎಂದು ಕೇಳಿದನು.

ತಾನಸೇನನಿಗೆ ರಾಗವನ್ನೆಳೆದು ಗಾಯನವನ್ನು ಮಾಡುವ ಸಮಯವನ್ನು ಕೊಡದೆ ಬೀರಬಲನು–"ಭೋ! ರಾಣಾಜಿಯವರೆ! ನಾವಿಬ್ಬರು ನಮ್ಮ ನಮ್ಮ ಯೋಗ್ಯತೆಯನ್ನು ಪರೀಕ್ಷೆಮಾಡಿಸಿಕೊಳ್ಳುವ ಕುರಿತು ಇಲ್ಲಿಗೆಬರುವಾಗ್ಗೆ 'ನನ್ನ ಯೋಗ್ಯತೆಯೇ ಮಿಗಿಲಾಗಲಿ' ಎಂದು ನಾನು ಪುಷ್ಕರ ತೀರ್ಥದಲ್ಲಿ ಸ್ನಾನ ಮಾಡಿದೆನು. ಹಾಗು ನನ್ನ ಇಷ್ಟಾರ್ಥ ಸಿದ್ಧಿಸಿದರೆ ಬ್ರಾಹ್ಮಣರಿಗೆ ಒಂದುನೂರು ಆಕಳುಗಳನ್ನು ದಾನವಾಗಿ ಕೊಡುವೆನೆಂದು ಬೇಡಿಕೊಂಡೆನು. ಈ ನನ್ನ ಜೊತೆಯವರಾದ ತಾನಸೇನರು ರಾಣಾರವರಿಂದ ತನ್ನ ಯೋಗ್ಯತೆಯು ಬೀರಬಲನಿಗಿಂತ ಮಿಗಿಲಾದರೆ ಖ್ವಾಜಾಸೇಲೀಮ ಗೋರಿಯ ಸನ್ನಿಧಿಯಲ್ಲಿ ಒಂದು ನೂರು ಆಕಳುಗಳನ್ನು ಬಲಿಯಾಗಿ ನೀಡುವೆನೆಂದು ಬೇಡಿಕೊಂಡು ಬಂದಿರುವರು. ಇನ್ನುಮೇಲೆ ಗೋವಧೆಯೂ ಗೋರಕ್ಷಣೆಯೂ

ಎರಡೂ ಕಾರ್ಯಗಳು ನಿಮ್ಮನ್ನು ಕೂಡಿವೆ" ಎಂದು ಅಸ್ಖಲಿತ ವಾಣಿಯಿಂದ ಉಚ್ಚರಿಸಿ ನಮಸ್ಕಾರಮಾಡಿ ಕುಳಿತನು.

ತಾನಸೇನನು ರಾಣಾನ ಸನ್ನಿಧಿಯಲ್ಲಿ ಹಾಡುವ ಹಾಡುಗಾರಿಕೆಯ ರಾಗ-ತಾಳ-ಲಯಗಳನ್ನು ಸ್ಮರಣೆಗೆ ತಂದುಕೊಂಡು ಗಾಯನಮಾಡುವ ಸಮಯಕಾಯುತ್ತ ಕುಳಿತಿದ್ದನು. ಬೀರಬಲನು ರಾಣಾನಿಗೆ ವಿದಿತಪಡಿಸಿದ ಮಾತುಗಳನ್ನೂ ಕೇಳುತ್ತಲಿದ್ದನು ತಾನು ಮಾರ್ಗದಲ್ಲಿ ಗೋರಿಯದರ್ಶನದಲ್ಲಿ ಬೇಡಿಕೊಂಡ ಬೇಡಿಕೆಯನ್ನು ಬೀರಬಲನು ರಾಣಾನ ಮುಂದೆ ಹೇಳಿದ್ದನ್ನು ಕೇಳಿ ಕಕ್ಕಾವಿಕ್ಕಿಯಾದನು. ಈ ಸ್ಥಿತಿಯಲ್ಲಿಯೇ ಅವನ ಗಾಯನದ ಮಾರ್ಗ ದೂರ ಉಳಿಯಿತು.

ರಾಣಾನು ಗೋ ಬ್ರಾಹ್ಮಣ ಪ್ರತಿಪಾಲಕನು. ಬೀರಬಲನಿಗೆ ಪ್ರಶಸ್ತಿಪತ್ರ ಕೊಟ್ಟು ಗೋಗಳನ್ನು ರಕ್ಷಿಸಿದ ಫಲವನ್ನು ಹೊಂದುವದನ್ನು ಬಿಟ್ಟು ತಾನಸೇನನಿಗೆ ಪ್ರಶಸ್ತಿಪತ್ರವನ್ನು ಕೊಟ್ಟು ಗೋವಧೆಯ ಪಾಪವನ್ನು ಅದೇಕೆ ಕಟ್ಟಿಕೊಳ್ಳುವನು?

ಬೀರಬಲನ ಚಾತುರ್ಯಯುಕ್ತ ಮಾತುಗಳಿಂದ ರಾಣಾನು ಸಂತುಷ್ಟನಾಗಿ ಅವನಿಗೇ ಯೋಗ್ಯತೆಯ ಪತ್ರಕೊಟ್ಟು ಕಳಿಸಿದನು.

